# Essays on Co-operation

# ಸಹಕಾರೀ ನಿಬಂಧ ಸಂಗ್ರಹ



ಚಂದರಗಿ

# Essays on Co-operation

# ಸಹಕಾರೀ ನಿಬಂಧ ಸಂಗ್ರಹ



ಲೇಖಕರು :

**ಚಂದರಗಿ ಗೋವಿಂದರಡ್ಡಿ**

ಸಹಕಾರೀ ಶೈಕ್ಷಣಿಕ ಇನ್ಸ್ಪೆಕ್ಟರ

ಧಾರವಾಡ



೧೯೫೧

**ಬೆಲೆ : ಎರಡು ರೂಪಾಯಿಗಳು**

# ಮುನ್ನುಡಿ

*

ಸಹಕಾರೀ ಶೈಕ್ಷಣಿಕ ಇನ್‌ಸ್ಪೆಕ್ಟರರಾದ ಶ್ರೀಯುತ ಚಂದರಗಿ ಗೋವಿಂದರಡ್ಡಿಯವರು ಬರೆದ 'ಸಹಕಾರೀ ನಿಬಂಧ ಸಂಗ್ರಹ' ವೆಂಬ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯಲು ನನಗೆ ತುಂಬಾ ಸಂತೋಷವೂ ಅಭಿಮಾನವೂ ಎನಿಸುತ್ತದೆ. ಕಳೆದ ಮೂವತ್ತು ವರುಷಗಳಿಂದಲೂ ನಾನು ಅವರನ್ನು ಚೆನ್ನಾಗಿ ಬಲ್ಲೆ. ಈ ಮೊದಲೇ ಅವರು 'ಸಹಕಾರ' ಹಾಗೂ ಅದಕ್ಕೆ ಸಮ್ಮಂಧಪಟ್ಟ ವಿಷಯಗಳ ಮೇಲೆ ಅದೆಷ್ಟೋ ಲೇಖಗಳನ್ನೂ ಹಲವಾರು ಚಿಕ್ಕ ಪುಟ್ಟ ಪುಸ್ತಕಗಳನ್ನು ಬರೆದು ಕರ್ನಾಟಕ ಸಹಕಾರೀ ಕ್ಷೇತ್ರದಲ್ಲಿ ಸಾಕಷ್ಟು ಪರಿಚಿತರಾಗಿರುವರಲ್ಲದೆ ಕನ್ನಡ ಸಹಕಾರೀ ಸಾಹಿತ್ಯಕ್ಕೆ ಒಂದು ಬಗೆಯ ಸೇವೆಯನ್ನು ಸಲ್ಲಿಸಿದ್ದಾರೆ. ಈ ಸಂಗ್ರಹದಲ್ಲಿ ಅವರು ಸಹಕಾರ, ಸಹಕಾರೀ ಚಳವಳಿ ಹಾಗೂ ಅವುಗಳಿಗೆ ಪೋಷಕವಾಗಿರುವಂತಹ ಬೇರೆ ಬೇರೆ ವಿಷಯಗಳ ಮೇಲೆ ಉತ್ತಮೋತ್ತಮವಾದ ನಿಬಂಧಗಳನ್ನು ಬರೆದಿರುವದರಿಂದ ಇದು, ಸಹಕಾರೀ ಸಂಸ್ಥೆಗಳ ಚಾಲಕರಿಗೆ, ಕಾರ್ಯದರ್ಶಿಗಳಿಗೆ ಮತ್ತು ಸಹಕಾರೀ ಶಿಕ್ಷಣವನ್ನು ಪಡೆಯಲಿಚ್ಛಿಸುವ ವಿದ್ಯಾರ್ಥಿಗಳಿಗೆ ಬಹು ಉಪಯುಕ್ತವುಳ್ಳ ಪುಸ್ತಕವಾಗಿರುವದೆಂದು ಅಭಿಪ್ರಾಯ ಪಡುತ್ತೇನೆ. ಭಾಷೆಯು ತಿಳಿಯಾಗಿಯೂ, ಮನೋಹರವಾಗಿಯೂ ಅದೆ. ಸಹಕಾರಿಗಳು ಇದನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

*F. B. Laxmeshwar*

ಗದಗ
೧೫-೧೨-೧೯೫೦

ಚೇಅರಮನ್
ಕರ್ನಾಟಕ ಸೆಂಟ್ರಲ್ ಕೋ-ಅಪರೇಟಿವ್ಹ
ಬ್ಯಾಂಕ, ಲಿ. ಧಾರವಾಡ.

# ಪ್ರ ಸ್ತಾ ವ ನೆ



ಕನ್ನಡ ಸಹಕಾರೀ ಸಾಹಿತ್ಯದಲ್ಲಿ ಕೆಲಸಮಾಡಲು ಪ್ರಾರಂಭಿಸಿ ನನಗೆ ಮೂವತ್ತು ವರುಷಗಳು ದಾಟುತ್ತಲಿರುವವು. ಈ ಅವಧಿಯಲ್ಲಿ ಸಹಕಾರ, ಒಕ್ಕಲತನ, ವಾಣಿಜ್ಯ ಮೊದಲಾದ ವಿಷಯ ಗಳ ಮೇಲೆ ನಮ್ಮ ನಾಡಿನ ವೃತ್ತಪತ್ರಿಕೆಗಳಲ್ಲಿಯೂ ಮಾಸ ಪತ್ರಿಕೆಗ ಗಳಲ್ಲಿಯೂ ಬಹು ಸಂಖ್ಯಾಕವಾಗಿ ಲೇಖನಗಳನ್ನು ಬರೆದಿರುವೆನು. ಸಹಕಾರೀ ಖಾತೆಯ ವರಿಷ್ಠ ಅಧಿಕಾರಿಗಳು ಮತ್ತು ನನ್ನಆಪ್ತ-ಸ್ನೇಹಿ ತರು ಮಾಡಿದ ಸೂಚನೆಯ ಫಲವಾಗಿ ಇದೀಗ 'ಸಹಕಾರೀ ನಿಬಂಧ ಸಂಗ್ರಹ'ವು ಸಿದ್ಧವಾಗಿದೆ. ಇದರಲ್ಲಿ ಒಟ್ಟಿಗೆ ೨೧ ನಿಬಂಧಗಳಿದ್ದು ಅವೆ ಲ್ಲವುಗಳು ಸಹಕಾರ, ಒಕ್ಕಲತನ ಸುಧಾರಣೆ, ಗ್ರಾಮಸುಧಾರಣೆ, ವ್ಯಾಪಾರ ಮುಂತಾದ ವಿಷಯಗಳಿಗೆ ಸಮ್ಮಂಧಪಟ್ಟವುಗಳಾಗಿರುತ್ತವೆ. ಎರಡು ನಿಬಂಧಗಳು ಸಹಕಾರೀ ಚಳವಳಿಯ ಬೆಳವಣಿಗೆಗೆ ತಮ್ಮ ಜೀವಿತವನ್ನೇ ಸವಿಸಿದಂತಹ ಇಬ್ಬರು ಮಹಾನುಭಾವರ ಆತ್ಮಚರಿತ್ರೆ ಗಳನ್ನು ವರ್ಣಿಸುತ್ತವೆ. ಕೊನೆಯ ನಿಬಂಧದಲ್ಲಿ ಸಹಕಾರೀ ವಚನ ಗಳನ್ನು ಕೊಡಲಾಗಿದೆ. ಈ ಪುಸ್ತಕಕ್ಕೆ ಪ್ರೋತ್ಸಾಹನೆಯು ದೊರೆ ತಲ್ಲಿ, ಸಹಕಾರೀ ಸಂಘಗಳಿಗೆ ಸಂಮ್ಮಂಧಪಟ್ಟ ಪ್ರತ್ಯೇಕ ಉಪಯುಕ್ತ ವಿಷಯಗಳ ಮೇಲೆ ಪುಸ್ತಕಗಳನ್ನು ಬರೆಯಬೇಕೆಂದು ಇಚ್ಛೆಯದೆ. ಅದನ್ನು ಕೈಗೂಡಿಸುವಂತೆ ಮಾಡುವದು ನಮ್ಮ ಸಹಕಾರಿಗಳ ಕೈಯ್ಯ ಲ್ಲಿರುವದೆಂದು ಬೇರೆ ಹೇಳಬೇಕಾಗಿಲ್ಲ.

ನನ್ನ ವಿನಂತಿಗೆ ಮಾನ್ಯಮಾಡಿ ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದಂತಹ ಸಹಕಾರೀ ಪ್ರಪಂಚದಲ್ಲಿಯೇ ಹೆಸರಾಂತ ಹಿರಿಯರ

ಲ್ಲೊಬ್ಬರಾದ ಶ್ರೀಮಾನ್ ಲಕ್ಷ್ಮೇಶ್ವರ ಫಕೀರಪ್ಪನವರಿಗೆ ಈಮೂಲಕ ನನ್ನ ಪ್ರೇಮದ ವಂದನೆಗಳನ್ನು ಅರ್ಪಿಸುತ್ತೇನೆ. ಅವರು ಬಹು ದಿವಸಗಳಿಂದ ಕರ್ನಾಟಕ ಹಾಗೂ ಮುಂಬಯಿ ಪ್ರಾಂತದಲ್ಲಿರುವಂತಹ ಅನೇಕ ತರಹದ ಉನ್ನತೋನ್ನತ ಸಹಕಾರೀ ಸಂಸ್ಥೆಗಳ ಮುಖ್ಯ ಚಾಲಕರಾಗಿ ಸಮಾಜ ಸೇವೆಯನ್ನು ಮಾಡುತ್ತಿರುವ ಸಂಗತಿಯು ಎಲ್ಲರಿಗೂ ಗೊತ್ತಿದ್ದವಾತು. ಇಂತಹ ಮಹನೀಯರ ಮುನ್ನುಡಿಗಾಗಿ ನಾನು ತುಂಬಾ ಉಪಕೃತನಿರುವೆ.

ಕೊನೆಯದಾಗಿ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿ ಅದಕ್ಕೆ ಕಳೆತಂದು ಕೊಟ್ಟಂತಹ ಲಿಂಗರಾಜ ಆರ್ಟ ಪ್ರೆಸ್ಸಿನ ಒಡೆಯರಾದ ಶ್ರೀಮಾನ್ ಬೀಳಗಿ ರಾಮಣ್ಣನವರ ಉಪಕಾರವನ್ನು ಸ್ಮರಿಸದೇ ಇರಲಾರೆ.

ಧಾರವಾಡ
೨೦-೧೭-೫೦

**ಚಂದರಗಿ ಗೋವಿಂದರಡ್ಡಿ**
ಸಹಕಾರೀ ಶೈಕ್ಷಣಿಕ ಇನಾಸ್ಪೆಕ್ಟರ
ಧಾರವಾಡ.

# *Essays on Co-operation*

# ಸಹಕಾರೀ ನಿಬಂಧ ಸಂಗ್ರಹ



## ಪ ರಿ ವಿ ಡಿ

## CONTENTS



# ಸಹಕಾರೀ ನಿಬಂಧ ಸಂಗ್ರಹ

*

## ಸಹಕಾರೀ ಕಾಯಿದೆಯ ಹುಟ್ಟು
## ಮತ್ತು
## ಚಳವಳಿಯ ಬೆಳವಣಿಗೆ



### ೧. ಸಹಕಾರೀ ಕಾಯಿದೆಯ ಉಗಮ

ಕಳೆದ ಶತಮಾನದ ೭೦ರಿಂದ ಹಿಂದುಸ್ತಾನ ಸರಕಾರ ಮತ್ತು ಅನೇಕ ಪ್ರಾಂತೀಕ ಸರಕಾರಗಳು, ಒಕ್ಕಲಿಗರ ಸಾಲಗೂಳಿತನವನ್ನು ಕಡಿಮೆ ಮಾಡಿ, ಅವರಿಗೆ ಸುಲಭವಾದ ಮತ್ತು ಯೋಗ್ಯವೆನಿಸುವ ರೀತಿಯಲ್ಲಿ ಪತ್ತಿನ ಸೌಕರ್ಯಗಳನ್ನು ದೊರಕಿಸಿ ಕೊಡುವ ವಿಚಾರವನ್ನು ಮಾಡುತ್ತಲಿರುವವು. ಮುಂಬಯಿ ಸರಕಾರವು ಎಲ್ಲಕ್ಕೂ ಮೊದಲು ಇದರ ಮಹತ್ವವನ್ನು ಕಂಡುಹಿಡಿದು ಅದಕ್ಕಾಗಿ ಒಂದು ಒಕ್ಕಲುತನದ ಬ್ಯಾಂಕಿನ ಸಂಘಟನೆಯ ಸಲುವಾಗಿ ಪ್ರಯತ್ನವನ್ನು ಮಾಡಿತು. ಸನ್ ೧೮೮೪ನೇ ಇಸ್ವಿಯಲ್ಲಿ ಪುಣೆ ಜಿಲ್ಲೆಯೊಳಗಿನ ಪುರಂಧರ ತಾಲೂಕಿನ ಒಕ್ಕಲಿಗರಿಗೆ ಹಣವನ್ನು ಸಾಲವಾಗಿ ಕೊಡಲಿಕ್ಕೆ ಒಂದು ಬ್ಯಾಂಕನ್ನು ಸ್ಥಾಪಿಸುವದರ ಸಲುವಾಗಿ ಸರ್ **ವಿಲಿಯಮ್ ವೆಡರಬರ್ನ**, ಆಯ್. ಸಿ. ಎಸ್. ಇವರ ನೇತೃತ್ವದಲ್ಲಿ ಭಾಂಡವಲುಗಾರರ ಒಂದು ಮಂಡಲವು ಏರ್ಪಡಿಸಲ್ಪಟ್ಟಿತ್ತು. ಮುಲ್ಕೀ ಅಧಿಕಾರಿಗಳ ಮುಖಾಂತರ ಸಾಲವಸೂಲಿಯನ್ನು ಮಾಡುವ

ಮತ್ತು ಇನ್ನಿತರ ಸರಕಾರೀ ಸವಲತ್ತುಗಳ ಮೂಲಕ ಅವರು ಹತ್ತು ಲಕ್ಷ ರೂಪಾಯಿಗಳ ಭಾಂಡವಲವನ್ನು ಕೂಡಿಸಿ ರೈತರ ಎಲ್ಲ ಸಾಲವನ್ನು ತೀರಿಸುವ ಉದ್ದೇಶದಿಂದ ಕಾರ್ಯವನ್ನು ಕೈಕೊಂಡರು. ಆದರೆ, ಆ ಕಾಲಕ್ಕೆ ಹಿಂದುಸ್ಥಾನದ ಸ್ಟೇಟ ಸೆಕ್ರೆಟರಿಯವರಾದ ಲಾರ್ಡ ಕಿಂಬರ್ಲೆಯವರು ಈ ಬ್ಯಾಂಕಿನ ಆರ್ಥಿಕ ಘಟನೆಯು ತಪ್ಪಾಗಿರುವದೆಂದೂ ಮತ್ತು ಇದು ಪ್ರಾಮುಖ್ಯವಾಗಿ ಸರಕಾರೀ ಸಂಸ್ಥೆಯಾಗುವದೆಂದೂ ಅಭಿಪ್ರಾಯಬಟ್ಟು ಈ ಯೋಜನೆಗೆ ಸಮ್ಮತಿಯನ್ನು ದಯಪಾಲಿಸಲಿಲ್ಲ. ಈ ಅವಧಿಯಲ್ಲಿ ಸನ್ **೧೮೮೩ನೇ ಇಸ್ವಿಯ ಭೂಮಿಯ ಸುಧಾರಣಾ ಸಾಲದ ಕಾಯಿದೆಯೂ** ( Land Improvement Loans Act of 1883 ) ಮತ್ತು ೧೮೮೪ನೇ ಇಸ್ವಿಯ ಒಕ್ಕಲಿಗರ ಸಾಲದ ಕಾಯಿದೆ (Agriculturists' Loans Act of 1884) ಗಳೂ ಪಾಸಾದವು. ಈ ಕಾಯಿದೆಗಳ ಮತ್ತು ಮುಂಬಯಿ ಸರಕಾರದ ಸನ್ ೧೮೭೯ನೇ ಇಸ್ವಿಯ **ದಕ್ಷಿಣ ಭಾಗದ ಒಕ್ಕಲಿಗರ ಪರಿಹಾರ ಕಾಯಿದೆಯ** ( Deccan Agriculturists' Relief Act ) ಸಂಯೋಗದಿಂದ ಒಕ್ಕಲಿಗರ ಪರಿಸ್ಥಿತಿಯನ್ನು ಸುಧಾರಿಸಲಿಕ್ಕೆ ಮಾರ್ಗವಾಗುವದೆಂದು ತಿಳಿದುಕೊಂಡದ್ದರಿಂದ ಮೇಲೆ ಹೇಳಿದ ಒಕ್ಕಲತನದ ಬ್ಯಾಂಕಿನ ಯೋಜನೆಯು ನಿಲ್ಲಿಸಲ್ಪಟ್ಟಿತು.

೨, ಹಿಂದೀ ಒಕ್ಕಲಿಗರ ಪ್ರಶ್ನೆಯನ್ನು ಬಿಡಿಸುವದಕ್ಕಾಗಿ ಸಹಕಾರ ತತ್ವವನ್ನು ಉಪಯೋಗಿಸುವ ವಿಚಾರವನ್ನು ಮೊಟ್ಟ ಮೊದಲು ಮದ್ರಾಸ ಸರಕಾರದವರು ಕಂಡುಹಿಡಿದು ಒಕ್ಕಲತನದ ಬ್ಯಾಂಕುಗಳ ತತ್ವ ಮತ್ತು ವ್ಯವಹಾರಗಳನ್ನು ಅನುಸರಿಸಲಿಕ್ಕೂ ಮತ್ತು ಅದೇ ಮಾದರಿಯ ಬ್ಯಾಂಕುಗಳನ್ನು ತಮ್ಮ ಇಲಾಖೆಯಲ್ಲಿ ಪ್ರಾರಂಭಿಸಲಿಕ್ಕೂ ಅವರು ಸರ್ **ಫ್ರೆಡ್ರಿಕ್ ನಿಕೋಲಸನ್**ರೆಂಬವರನ್ನು ಯುರೋಪಖಂಡಕ್ಕೆ ಕಳಿಸಿಕೊಟ್ಟರು. ಸನ್ ೧೮೯೫ ಮತ್ತು ೧೮೯೭ರ

ಮಧ್ಯಂತರದಲ್ಲಿ ಅವರು ಒಂದು ಮಹತ್ವವಾದ ವರದಿಯನ್ನು ಸಾದರ ಪಡಿಸಿದರು. ಅದು ಈಗಲಾದರೂ ಸಹ ಆ ವಿಷಯದ ಮೇಲೆ ಉನ್ನತವಾದ ಹೊತ್ತಿಯಾಗಿಬಿಟ್ಟಿದೆ. ಅವರು ತಮ್ಮ ಅಭಿಪ್ರಾಯ ವನ್ನು '**ರೆಫೆಸಿಯನ್ನನನ್ನು ಕಾಣು**' ಇವೆರಡೇ ಶಬ್ದಗಳಲ್ಲಿ ಉಪಸಂಹರಿಸಿರುವರು. ಇವುಗಳಿಂದ ರೆಫೆಸಿಯನ್ನನೇ ಮೊದಲು ಪತ್ತಿನ ಸಂಘಗಳ ಪದ್ಧತಿಯನ್ನು ಕಂಡುಹಿಡಿದನೆಂಬುವ ಸಂಗತಿಯು ಗೊತ್ತಾಗಿ ಅದರಂತೆ ಕಾರ್ಯವನ್ನು ಕೈಕೊಳ್ಳಲಿಕ್ಕೆ ಸೂಚಿಸಿದಂತಾ ಗುವದಲ್ಲದೆ ಆ ಚಳವಳಿಗಾಗಿ ಹುರುಪಿನಿಂದ ಕೆಲಸ ಸಾಗಿಸುವ ಕಾರ್ಯಕರ್ತರ ಅವಶ್ಯಕತೆಯನ್ನು ಹೇಳಿದಂತಾಗುತ್ತದೆ. ನಿಕೋಲ ಸನ್ನರು ತೋರಿಸಿಕೊಟ್ಟ ಸೂಚನೆಯ ಮೇರೆಗೆ ಸಂಯುಕ್ತ ಪ್ರಾಂತ ದಲ್ಲಿ ಡ್ಯೂಪರನೇಯವರೂ, ಪಂಜಾಬದಲ್ಲಿ ಮ್ಯಾಕ್ಲೆಗನ್ನರೂ ಮತ್ತು ಇನ್ನಿತರ ಅಧಿಕಾರಿಗಳು ಬೇರೆ ಬೇರೆ ಕಡೆಯಲ್ಲಿಯೂ ಹಲಕೆಲವು ಸಂಘಗಳನ್ನು ಸ್ಥಾಪಿಸಿದರು. ಆಗಿನ ವ್ಹಾಯಿಸರಾಯರಾದ ಲಾರ್ಡ ಕರ್ಝನರು ಈ ರೀತಿಯಲ್ಲಿ ಬೇರೆ ಬೇರೆಯಾಗಿ ಕೈಕೊಂಡ ಕಾರ್ಯಗಳಲ್ಲಿ ಅಷ್ಟೊಂದು ಮಹತ್ವದ ಫಲವು ದೊರೆಯಲಾರದೆಂದು ತಿಳಿದು, ಆ ಸಮಯದಲ್ಲಿದ್ದ ಪುರೋಗಾಮಿ ಸಂಘಗಳನ್ನು ಪರೀಕ್ಷಿಸಿ ಯಾವ ರೀತಿಯಲ್ಲಿ ಕಾಯಿದೆಯನ್ನು ಮಾಡಲಿಕ್ಕೆ ಅನುಕೂಲವಾಗುವ ದೆಂಬ ಬಗ್ಗೆ ಸೂಚನೆಗಳನ್ನು ಮಾಡಲಿಕ್ಕೆ ಅವರು ಸರ್ ಎಡ್ವರ್ಡ ಲಾ ಎಂಬವರ ನೇತೃತ್ವದಲ್ಲಿ ಒಂದು ಮಂಡಲವನ್ನು ನಿಯಮಿಸಿದರು.

೩. ಇದರ ಪರಿಣಾಮವಾಗಿ ಸನ್ ೧೯೦೪ನೇ ಇಸ್ವಿಯ ಸಹಕಾರೀ ಪತ್ತಿನ ಸಂಘಗಳ ಕಾಯಿದೆಯು ಪಾಸಾಯಿತು. ಇದನ್ನು ಪ್ರಕಟಿಸುವ ಅವಧಿಗೆ ಇದರ ಗೊತ್ತುಗುರಿಗಳನ್ನೆಲ್ಲ ಸ್ಥಾನಿಕ ಸರಕಾರು ಗಳಿಗೆ ಮತ್ತು ಜನಸಾಮಾನ್ಯರಿಗೆ ತಿಳಿಯಪಡಿಸುವದಕ್ಕಾಗಿ ಸರ್ ಡೇಂಜಿಲ್ ಇಬೆಟ್‌ಸನ್‌ರಿಂದ ಒಂದು ಮನವಿಯು ಹೊರಡಿಸಲ್ಪ ಟ್ಟಿತು. ಈ ಕಾಯಿದೆಯನ್ವಯ ಹಳ್ಳಿಯ ಸಂಘಗಳೆಂತಲೂ

(Rural) ಮತ್ತು ಶಹರದ ( Urban ) ಸಂಘಗಳೆಂತಲೂ ಹೀಗೆ ಎರಡು ಪ್ರಕಾರದ ವರ್ಗಗಳಾದವು. ಹಳ್ಳಿಯ ಸಂಘಗಳು ಅನಿಯಮಿತ ಜವಾಬುದಾರಿಯುಳ್ಳವುಗಳೇ ಆಗಿರತಕ್ಕದ್ದು. ಆದರೆ ಶಹರದ ಸಂಘಗಳು ಮಾತ್ರ ನಿಯಮಿತ ಇಲ್ಲವೇ ಅನಿಯಮಿತ ಜವಾಬುದಾರಿಯುಳ್ಳವುಗಳಿರಬೇಕು. ಅವುಗಳ ಕ್ಷೇತ್ರವು ಆದಷ್ಟು ಸಣ್ಣದಿರತಕ್ಕದ್ದು. ಸಾಲಗಳನ್ನು ಬರೇ ಜಾಮೀನಿನ ಮೇಲೆ ಇಲ್ಲವೆ ಒತ್ತೀ ಬರೆಯಿಸಿಕೊಂಡು ಮೆಂಬರರಿಗೆ ಮಾತ್ರ ಕೊಡಬಹುದು. ಸರಕಾರೀ ಅಧಿಕಾರಿಗಳಿಂದ ವರುಷಕ್ಕೊಂದಾವರ್ತಿ ಸಂಘವನ್ನು ಅವಶ್ಯವಾಗಿ ತಪಾಸು (Audit) ಮಾಡತಕ್ಕದ್ದು. ಸಂಘದ ಶೇಅರು ಭಾಂಡವಲಿನಲ್ಲಿ ಸಭಾಸದನ ಹಿತಸಮ್ಬಂಧದ ಬಗ್ಗೆ ನಿಯಂತ್ರಣವಿರತಕ್ಕದ್ದು. ಇದಕ್ಕೆ ವಿಶೇಷ ಸವಲತ್ತಿನ ಮೂಲಕ ಸ್ಟಾಂಪ, ರಜಿಸ್ಟ್ರೇಶನ್ ಮತ್ತು ಇನ್‍ಕಮ್‍ಟ್ಯಾಕ್ಸ ಕಾಯಿದೆಗಳು ಲಾಗೂ ಆಗುವದಿಲ್ಲ. ಸಂಘಗಳ ನಿಯಂತ್ರಣ ಮತ್ತು ಮೇಲ್ವಿಚಾರಣೆಗಳ ಬಗ್ಗೆ ಹೆಚ್ಚಿನ ಅಧಿಕಾರಗಳನ್ನು ಕೊಟ್ಟು ಅವುಗಳನ್ನು ರಜಿಸ್ಟ್ರಾರರೆಂಬ ಸರಕಾರೀ ಅಮಲದಾರರ ವಶಕ್ಕೆ ಒಪ್ಪಿಸಲಾಯಿತು.

೪. ಒಕ್ಕಲಿಗರ ಆರ್ಥಿಕ ಸ್ಥಿತಿಯನ್ನು ಸುಧಾರಿಸಲಿಕ್ಕೆ ಆತುರವುಳ್ಳದ್ದಾಗಿ ಸರಕಾರವು ಹಿಂದುಸ್ತಾನದಲ್ಲಿ ಈ ಚಳವಳಿಯನ್ನು ಪ್ರಾರಂಭಿಸಿದ್ದು ನಮಗೆ ಕಂಡುಬರುತ್ತದೆ. ಜಪಾನದಲ್ಲಿಯೂ ಕೂಡ ಈ ಚಳವಳಿಯು ನಮ್ಮ ಹಿಂದುಸ್ತಾನದಲ್ಲಿ ಪ್ರಾರಂಭವಾದ ಹಾಗೆಯೇ ಮೊದಲು ಸರಕಾರದವರಿಂದಲೇ ಪ್ರಾರಂಭವಾಗಿರುತ್ತದಲ್ಲದೇ ಜನರಿಂದಾಗಿರುವದಿಲ್ಲ. ಜನರು ಕಾಲಕಾಲಕ್ಕೆ ಸರಕಾರದವರಿಗೆ ಮಾಡಿಕೊಂಡ ಒತ್ತಾಯದ ಬೇಡಿಕೆಗಳ ಫಲವಾಗಿ ಈ ಹೊಸ ಸಹಕಾರೀ ಕಾಯಿದೆಯು ಉಂಟಾಗಿದೆ. ಎರಡನೇ ದೇಶಗಳಲ್ಲಿಯ ಅದರ ಕಲ್ಯಾಣಕಾರಕವಾದ ಪರಿಣಾಮಗಳನ್ನು ನೋಡಿ, ಈ ದೇಶದ ಜನ

ರಿಗೂ ಅದರ ಲಾಭವನ್ನು ದೊರಕಿಸಿ ಕೊಡುವದಕ್ಕಾಗಿ ಸ್ವತಃ ಸರಕಾರದವರೇ ಅದನ್ನು ಪ್ರಾರಂಭಿಸಿದ್ದಾಗಿದೆ.

೫. ಮೊದಲನೇ ಕಾಯಿದೆಯು ಅವಶ್ಯವಾಗಿ ಬಹಳೇ ಸುಲಭಕಾರಿಯಾಗಬೇಕಾಗಿತ್ತು. ಅಜ್ಞರಾದ ಒಕ್ಕಲಿಗರ ಸಂಗಡ ಬಳಿಕೆಯಲ್ಲಿ ತರಲಿಕ್ಕೆ ಅತಿ ಕಷ್ಟಕರವಾದದ್ದೂ ಮತ್ತು ಬಹು ತೊಡಕಿನದಾಗಿಯೂ ಇರುವ ಕಂಪನಿಯ ಕಾಯಿದೆಯು ಅವರಿಗೆ ಉಪಯೋಗವಾಗುವದಿಲ್ಲೆಂದು ಆ ಕಾಯಿದೆಯನ್ನು ರಚಿಸುವವರು ಅರಿತವರಾಗಿದ್ದರು. ಆದರೂ ಕಂಪನಿಗಳ ಕಾಯಿದೆಯ ಮೇಲ್ಮೆಯನ್ನನುಸರಿಸಿಯೇ ಸಹಕಾರೀ ಸಂಘಗಳನ್ನು ಹೊರಡಿಸುವದು ಅವರ ವಿಚಾರವಾಗಿತ್ತು. ಸಹಕಾರೀ ಸಂಘಗಳ ಕಾಯಿದೆಯನ್ನು ಬೇಕಾದಹಾಗೆ ಅನುಕೂಲಿಸಿಕೊಂಡು ಅದರ ಬಗ್ಗೆ ನಿಯಮಗಳನ್ನು ಮಾಡುವ ಹೆಚ್ಚಿನ ಅಧಿಕಾರಗಳು ಸ್ಥಾನಿಕ ಸರಕಾರುಗಳಿಗೆ ಕೊಡಲ್ಪಟ್ಟವು. ಇದರಿಂದ ಪ್ರತಿಯೊಂದು ಪ್ರಾಂತವು ತನಗೆ ತಿಳಿದ ಮೇರೆಗೆ ಚಳವಳಿಯನ್ನು ಬೆಳೆಯಿಸಿಕೊಳ್ಳಲಿಕ್ಕೆ ಸಾಧ್ಯವಾಯಿತು. ಸರಳವಾಗಿಯೂ ಮತ್ತು ಬೇಕಾದ ಹಾಗೆ ಅನುಕೂಲಿಸಿಕೊಳ್ಳುವಂತೆಯೂ ಇರುವದೇ ಈ ಕಾಯಿದೆಯ ಮುಖ್ಯ ಲಕ್ಷಣಗಳು.

೬. ಕೆಲವು ದಿವಸಗಳಲ್ಲಿಯೇ ಅದರಲ್ಲಿರತಕ್ಕ ಕುಂದುಕೊರತೆಗಳು ಕಂಡುಬಂದು ಅವುಗಳನ್ನು ಹೋಗಲಾಡಿಸಬೇಕಾಯಿತು. ಇವುಗಳಲ್ಲಿ ಮೊದಲನೇ ಮಾತೆಂದರೆ ಈ ಕಾಯಿದೆಯು ತನ್ನ ವ್ಯವಹಾರ ಕ್ಷೇತ್ರವನ್ನು ಬರೇ ಪತ್ತಿನ ಸಂಘಗಳಿಗೋಸ್ಕರವಾಗಿಯೇ ಮೀಸಲಾಗಿಟ್ಟುಕೊಂಡಿತ್ತು. ಮಿ. ಹೆನ್ರಿ ವೂಲ್ಫರವರು ಹೇಳುವಂತೆ, ಕಾಯಿದೆಯ ಪೀಠಿಕೆಯಲ್ಲಿ ಕಂಡುಬರುವ ‘ ಪತ್ತು ’ ಈ ಶಬ್ದವು ತಪ್ಪಿ ಬಿದ್ದಿರುವುದೋ ಅಥವಾ ಅದು ಬುದ್ಧಿಪೂರ್ವಕವಾಗಿಯೇ ಸೇರಿಸಲ್ಪಟ್ಟಿರುವುದೋ ಎಂಬುವ ಮಾತು ಅಷ್ಟೇನು ಮಹತ್ವದ್ದಲ್ಲ. ಈ ಶಬ್ದವು ಅಲ್ಲಿರುವದರಿಂದ ಮಾತ್ರ, ಬಿನ್ ಪತ್ತಿನ ಚಳವಳಿಗೆ

ಆಸ್ಪದವಿಲ್ಲದಂತಾಗಿ ಕಾಯಿದೆಯಲ್ಲಿ ಯೋಗ್ಯವಾದ ತಿದ್ದುಪಡಿಯ ಗುವ ವರೆಗೆ ಆದರ ಉದ್ದೇಶದ ಸಲುವಾಗಿ ಸಂಘಗಳನ್ನು ಹೊರಡಿ ಲಿಕ್ಕೆ ಅವಕಾಶವಿಲ್ಲದಂತಾಯಿತು. ಈ ಕಾಯಿದೆಯಲ್ಲಿ ಕಂಡುಬಂ ಎರಡನೇ ಕೊರತೆಯೆಂದರೆ ಪ್ರಾಥಮಿಕ ಸಂಘಗಳಿಂದ ಮತ್ತು ವ್ಯ ಗಳಿಂದ ಕೂಡಿಕೊಂಡು ಮೇಲ್ವಿಚಾರಣೆಯ ಅಥವಾ ಹಣ ಪೂರೈಸ ವಂತಹ ಉದ್ದೇಶಗಳನ್ನಿಟ್ಟುಕೊಂಡು ಕೆಲಸ ಮಾಡುವ ಮಧ್ಯವರ್ತಿ ಇಲ್ಲವೇ ಸಂಯುಕ್ತ ಸಂಸ್ಥೆಗಳಿಗೆ ಆಸ್ಪದವಿಲ್ಲದಿರುವದು. ಕಾಯಿ ಯಲ್ಲಿರುವ ಮೂರನೇ ನ್ಯೂನತೆಯೆಂದರೆ ಸಂಘಗಳಲ್ಲಿ ಮಾಡಿ 'ಹಳ್ಳಿಯ' ಮತ್ತು 'ಶಹರದ' ಎಂಬ ಅಶಾಸ್ತ್ರೀಯವಾದ ವರ್ಗೀ ಕರಣವು.

೭. ಇವೆಲ್ಲ ಕುಂದುಕೊರತೆಗಳು ಮೇಲಿಂದಮೇಲೆ ರಜಿಸ್ಟ್ರಾ ರವರುಗಳ ಪರಿಷತ್ತುಗಳ (Conferences) ಗಮನಕ್ಕೆ ಬಂದ ವಿಮರ್ಶೆ ಮಾಡಲ್ಪಟ್ಟವು. ಇದಲ್ಲದೆ ಪರಪ್ರಾಂತಗಳಲ್ಲಿ ಹಣ ಪೂರೈ ಸುವ ಮತ್ತು ಮೇಲ್ವಿಚಾರಣೆಯನ್ನು ಮಾಡುವ ಮಧ್ಯವರ್ತಿ ಸಂಸ್ಥೆ ಗಳ ಬಗ್ಗೆ ಮತ್ತು ಬಿನಾಪತ್ತಿನ ಚಳವಳಿಯ (ಮುಖ್ಯವಾಗಿ ಕೊಳ್ಳುವ ಮತ್ತು ಮಾರುವ ಸಂಘಗಳ ರಚನೆಗಾಗಿ) ಬೆಳವಣಿಗೆಯ ಬಗ್ಗೆ ಹೆಚ್ಚಾಗಿ ಬೇಡಿಕೆಗಳುಂಟಾದ್ದರಿಂದ ಕಾಯಿದೆಯಲ್ಲಿ ತಿದ್ದುಪಡಿ ಮಾಡುವ ಅವಶ್ಯಕತೆಯುಂಟಾಗಿ ಸನ್ ೧೯೧೨ನೇ ಇಸ್ವಿಯಲ್ಲಿ ಮತ್ತೊಂದು ಕಾಯಿದೆಯು ಪಾಸುಮಾಡಲ್ಪಟ್ಟಿತು.

೮. ಈ ಕಾಯಿದೆಯಿಂದ 'ಹಳ್ಳಿಯ' ಮತ್ತು 'ಶಹರದ' ಎಂಬ ತಾರತಮ್ಯವು ಅಳಿದು ಹೋಗಿ ಸಭಾಸದರ ಬೋಜಾದ ಗುಣ ಧರ್ಮಕ್ಕನುಸರಿಸಿ '**ನಿಯಮಿತ ಜವಾಬುದಾರಿಯ**' ಮತ್ತು '**ಅನಿಯಮಿತ ಜವಾಬುದಾರಿಯ**' ಸಂಘಗಳೆಂದು ವರ್ಗೀ ಕರಣವನ್ನು ಮಾಡಲಾಯಿತು. ವ್ಯಕ್ತಿ ಮತ್ತು ಸಂಘಗಳಿಂದ ಕೂಡಿ ಕೊಂಡಂತಹ ಪ್ರಾಂತಿಕ ಮತ್ತು ಮಧ್ಯವರ್ತಿ ಬ್ಯಾಂಕುಗಳನ್ನೂ

ಮತ್ತು ಮೇಲ್ವಿಚಾರಣೆಯ ಸಂಸ್ಥೆಗಳನ್ನೂ ನೋಂದಾಯಿಸಲಿಕ್ಕೆ ಈ ಹೊಸ ಕಾಯಿದೆಯಲ್ಲಿ ಆಸ್ಪದವಾಯಿತು. ಕಾಯಿದೆಯ ಹೆಸರಿನಲ್ಲಿದ್ದ 'ಪತ್ತಿನ' ಈ ಶಬ್ದವು ಹೊರಟು ಹೋದದ್ದರಿಂದ ಬಿನ್‌ಪತ್ತಿನ ಸಂಘಗಳ ನೋಂದಣಿಯ ಕಾರ್ಯಕ್ಕೂ ಅನುಕೂಲವಾಗಿಬಿಟ್ಟಿತು. ಈ ಕಾಯಿದೆಯಲ್ಲಿಯೂ ಕೂಡ ಮೊದಲಿನ ಕಾಯಿದೆಯಲ್ಲಿದ್ದ ಮೂಲ ಭೂತವಾದ ಅಂದರೆ ಸರಳತೆ ಮತ್ತು ಬೇಕಾದಹಾಗೆ ಅನುಕೂಲಿಸಿ ಕೊಳ್ಳಲು ಬರುವಂತಹ ಗುಣವುಳ್ಳದ್ದಾಗಿಯೂ ಇರುವ ಉತ್ತಮ ತತ್ವಗಳನ್ನು ಹಾಗೇ ಇಟ್ಟಿರುವದು ಕಂಡುಬರುತ್ತದೆ. ಇದಲ್ಲದೆ ಪ್ರತಿಯೊಂದು ಪ್ರಾಂತಕ್ಕೆ ತಮ್ಮ ತಮ್ಮ ಅನುಕೂಲತೆಯ ಮೇರೆಗೆ ಚಳವಳಿಯ ಬೆಳವಣಿಗೆಯನ್ನು ಮಾಡಿಕೊಳ್ಳುವದರ ಸಲುವಾಗಿ ಕಾಯಿದೆಯನ್ವಯ ಹೆಚ್ಚಾಗಿ ನಿಯಮಗಳನ್ನು ಮಾಡಿಕೊಳ್ಳುವ ಬಗ್ಗೆ ಅಧಿಕಾರಗಳು ಕೊಡಲ್ಪಟ್ಟವು.

೯. ಸನ್ ೧೯೧೨ನೇ ಇಸ್ವಿಯ ಕಾಯಿದೆಯನ್ನು ಪಾಸು ಮಾಡುವದರಿಂದ ಚಳವಳಿಯಲ್ಲಿ ಒಂದು ನವಚೇತನದ ಸಂಚಾರ ವಾದಂತಾಗಿ ಸಂಘಗಳ ಸಂಖ್ಯೆಯಲ್ಲಿಯೂ, ಸಭಾಸದರ ಸಂಖ್ಯೆ ಯಲ್ಲಿಯೂ ಮತ್ತು ದುಡಿಯುವ ಭಾಂಡವಲಿನ ಹಣದಲ್ಲಿಯೂ ಹೆಚ್ಚಾಗಿ ಬೆಳವಣಿಗೆಯಾಯಿತು. ಸನ್ ೧೯೧೪ರಲ್ಲಿ ಹಿಂದುಸ್ತಾನ ಸರಕಾರವು ಪರಿಸ್ಥಿತಿಯನ್ನು ಪರ್ಯಾಲೋಚಿಸಿ, ಆರ್ಥಿಕ ದೃಷ್ಟಿ ಯಿಂದಲೂ ಮತ್ತು ಹಣದ ಭದ್ರತೆಯ ದೃಷ್ಟಿಯಿಂದಲೂ ಚಳ ವಳಿಯು ಹೇಗೆ ಸಾಗಿರುವದೆಂಬದನ್ನು ಕುರಿತು ವಿಚಾರಣೆಯನ್ನು ಮಾಡಿ ವರದಿಯನ್ನು ಸಾದರಪಡಿಸುವದಕ್ಕಾಗಿಯೂ ಮತ್ತು ಅವಶ್ಯ ವೆನಿಸುವ ಸುಧಾರಣೆಗಳನ್ನು ಸೂಚಿಸುವದಕ್ಕಾಗಿಯೂ ಒಂದು ಮಂಡಲವನ್ನು ನಿಯಮಿಸಿದರು. ಇದರ ಅಧ್ಯಕ್ಷರು ಸರ್ **ಎಡ್ ವರ್ಡ ವ್ಯಾಕ್ಲೆಗನ್ನ**ರು. ಈ ಮಂಡಲವು ಸನ್ ೧೯೧೫ರಲ್ಲಿ ಒಂದು ವ್ಯಾಪಕವಾದ ವರದಿಯನ್ನು ಸಾದರಪಡಿಸಿತು. ಅದರ

ಹೆಸರು “ ಹಿಂದುಸ್ತಾನ ಸಹಕಾರ ಮಂಡಲದ ವರದಿ ” ಎಂದು ಇ ವದು. ( “ The Report of the Committee on Co operation in India ” ). ಸಹಕಾರೀ ಚಳವಳಿಯ ಬೆಳವಣಿ. ಗಾಗಿಯೂ ಮತ್ತು ಸಂಘಟನೆಗಾಗಿಯೂ ದೂರದರ್ಶಿಕತ್ವತೆಯ ಧೋರಣೆಯಿಂದ ಅದರಲ್ಲಿಯೂ ಮುಖ್ಯವಾಗಿ ಹಣದ ಭದ್ರತೆಯ ದೃಷ್ಟಿಯಿಂದ ಈ ಮಂಡಲವು ಎಷ್ಟೊಂದು ಉಪಯುಕ್ತವಾ ಯೋಜನೆಗಳನ್ನು ಸೂಚಿಸುವದು. ಈ ದೇಶದಲ್ಲಿ ಇದುವರೆಗೆ ಬೆ ಕಿಗೆ ತರಲ್ಪಟ್ಟ ಸಾಹಿತ್ಯ ಕ್ಷೇತ್ರದಲ್ಲಿ ಈ ವರದಿಯು ಅಗ್ರಸ್ಥಾನವನ್ನು ಪಡೆದಿರುವದಲ್ಲದೇ ಅದರಲ್ಲಿ ನೂಡಿದ ಮುಖ್ಯವಾದ ಶಿಫಾರಸುಗಳು ಹೆಚ್ಚಾಗಿ ಈಗಿನ ಕಾಲಕ್ಕೂ ಕೂಡಾ ಅನ್ವಯಿಸುತ್ತವೆ.

೧೦. ಸನ್ ೧೯೧೯ನೇ ಇಸ್ವಿಯ ರಾಜಕೀಯ ಸುಧಾರಣೆಗಳು ಸಹಕಾರೀ ಖಾತೆಯನ್ನು ವರ್ಗಾಯಿಸಿದ (Transferred Subject) ವಿಷಯವನ್ನಾಗಿ ಮಾಡಿಬಿಟ್ಟವು. ಸಹಕಾರೀ ಚಳವಳಿಯು ಬಹು ಮುಖವಾಗಿ ಒಳ್ಳೇ ಜೋರಿನಿಂದ ಮುಂದಡಿಯಿಟ್ಟ ಪ್ರಾಂತಗಳಲ್ಲಿ ಸನ್ ೧೯೧೨ನೇ ಇಸ್ವಿಯ ಕಾಯಿದೆಯಿಂದ ಸಾಕಷ್ಟು ಉಪಯೋಗ ವಾಗುವದಿಲ್ಲೆಂಬ ಸಂಗತಿಯು ಅನುಭವಕ್ಕೆ ಬಂದಿತು. ಆಯಾ ಪ್ರಾಂತಿಕ ಸರಕಾರುಗಳು ತಮ್ಮ ತಮ್ಮ ಬೇಡಿಕೆಗಳನ್ನು ಅನುಕೂಲಿಸಿ ಕೊಂಡು ಅವುಗಳನ್ನು ಪ್ರಾಂತದ ಸಹಕಾರೀ ಕಾಯಿದೆಯಲ್ಲಿ ಸೇರ್ಪ ಡಿಸಿಕೊಳ್ಳಲು ಈಗ ಸಮಯವು ಪ್ರಾಪ್ತವಾಗಿದ್ದಿತು. ಮುಂಬಯಿ ಪ್ರಾಂತವು ಮುಂದಾಳತ್ವವನ್ನು ವಹಿಸಿದ್ದರಿಂದ “ ಮುಂಬಯಿ ಸಹ ಕಾರೀ ಸಂಘಗಳ ಕಾಯಿದೆಯು ಸನ್ ೧೯೨೫ನೇ ಇಸ್ವಿಯ ಮುಂಬಯಿ ೭ನೇ ಕಾಯಿದೆಯು ” ಪಾಸು ಮಾಡಲ್ಪಟ್ಟಿತು.

೧೧ ಸನ್ ೧೯೧೨ನೇ ಇಸ್ವಿಯ ಹಳೇ ಕಾಯಿದೆಯು ಒಕ್ಕ ಲಿಗರಲ್ಲಿಯೂ, ಕಾರಾಗೀರರಲ್ಲಿಯೂ ಮತ್ತು ಬಡವರಲ್ಲಿಯೂ ಮಿತ ವ್ಯಯ ಹಾಗೂ ಸ್ವಾವಲಂಬನವನ್ನು ಹೆಚ್ಚಿಸುವದಾಗಿತ್ತು. ೧೯೨೫ನೇ

ಇಸ್ವಿಯ ಮುಂಬಯಿ ಕಾಯಿದೆಯು ಒಕ್ಕಲಿಗರಲ್ಲಿಯೂ ಮತ್ತು ಸಮಾನ ಆರ್ಥಿಕ ಗರಜುಗಳುಳ್ಳ ಯಾವತ್ತರಲ್ಲಿಯೂ (ಅವರು ಬಡವರೇ ಇರಲಿ ಅಥವಾ ಯಾರೇ ಇರಲಿ) ಸಹಕಾರೀ ತತ್ವಗಳಿಗನುಸರಿಸಿ ಮಿತವ್ಯಯ, ಸ್ವಾವಲಂಬನ ಮತ್ತು ಪರಸ್ಪರ ಸಹಾಯವನ್ನು ಹೆಚ್ಚಿಸುವದಾಗಿರುತ್ತದೆ.

೧೨. ಈ ತರಹದ ವಿಶಾಲವಾದ ಗುರಿಯು ವಿನಹ, ಸನ್ ೧೯೨೫ನೇ ಇಸ್ವಿಯ ಮುಂಬಯಿ ಸಹಕಾರೀ ಸಂಘಗಳ ಕಾಯಿದೆಯು ಸನ್ ೧೯೧೨ನೇ ಇಸ್ವಿಯ ಕಾಯಿದೆಗಿಂತ ಅನೇಕ ಸಂದರ್ಭಗಳಲ್ಲಿ ಸುಧಾರಣೆಯುಳ್ಳದ್ದಾಗಿರುವದು. ಅವುಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ಕೊಡುತ್ತೇವೆ:-

೧. ಸಭಾಸದರು ಯಾವ ಉದ್ದೇಶದ ಸಲುವಾಗಿ ಸಂಘವನ್ನು ಮಾಡಿಕೊಳ್ಳಲಿಕ್ಕೆ ಕೂಡುವರೋ ಆ ಉದ್ದೇಶಕ್ಕನುಸರಿಸಿ ಶಾಸ್ತ್ರೋಕ್ತವಾಗಿ ಮಾಡಿರುವಂತಹ ಸಂಘಗಳ ವರ್ಗೀಕರಣವು.

೨. ಸಂಘಗಳನ್ನು ರದ್ದುಪಡಿಸುವ ಪದ್ಧತಿಯಲ್ಲಿ ನಿಶ್ಚಲವಾದ ರೀತಿಯನ್ನು ಹೇಳಿದ್ದಾಗಿದೆ.

೩. ಪಂಚಾಯತಿಯ ವಿಧಾನವು ಕಾಯದೆಯಲ್ಲಿಯೇ ಅಡಕವಾಗಿ ಬಿಟ್ಟಿದೆ. ಹಳೇ ಕಾಯಿದೆಯಲ್ಲಿ ಅದು ನಿಯಮಗಳಲ್ಲಿ (Rules) ಮತ್ತು ಹೊಸ ಕಾಯಿದೆಯಲ್ಲಿ ಸಹಕಾರೀ ಸಂಘಗಳ ವಸೂಲಿಯನ್ನು ಭೂಮಿಯ ಮಹಸೂಲಿನಂತೆ ವಸೂಲ ಮಾಡಬೇಕೆಂಬ ವಿಧಾನವು ಹೇಳಲ್ಪಟ್ಟಿದೆ. ಈ ಮೊದಲು ಇದಕ್ಕಾಗಿ ಸಂಘಗಳಿಂದ ಒಂದೇ ಸವನೆ ಬೇಡಿಕೆಗಳು ನಡೆದಿದ್ದವು.

೪. ಒಬ್ಬ ಮೆಂಬರನಿಗೆ ಒಂದೇ ಮತ ಇರತಕ್ಕದ್ದೆಂಬ ತತ್ವವು ಕಾಯಿದೆಯಲ್ಲಿಯೇ ಹೇಳಲ್ಪಟ್ಟಿದೆ,

೫. ಸನ್ ೧೯೧೨ನೇ ಇಸ್ವಿಯ ಕಾಯಿದೆಯಲ್ಲಿ ಕೆಲವೊಂದು ವಿಷಯಗಳ ಮೇಲೆ ಸಂಘದ ಮೊದಲಿನ ಹಕ್ಕು (Prior Claim) ಇದ್ದದ್ದು ಹೊಸಕಾಯಿದೆಯಲ್ಲಿ ಬದಲಾಗಿ ಅದು ಮೊದಲನೇ ಚಾರ್ಜ (First Charge) ಆಗಿದೆ.

೬. ಸಹಕಾರೀ ಬೆಳೆಗಳ ಸಂರಕ್ಷಣಾ ಸಂಘಗಳಿಗೆ ಮನಸ್ಸಿಲ್ಲದವರ ಅಲ್ಪಸಂಖ್ಯಾಕರನ್ನು ಒತ್ತಾಯಪಡಿಸಿ ಇಂತಹ ಘಟನೆಗಳಿಗೆ ತಗಲಬಹುದಾದ ವೆಚ್ಚವನ್ನು ಪ್ರಮಾಣಕ್ಕನುಸರಿಸಿ ಅವರಿಂದ ವಸೂಲ ಮಾಡುವ ವಿಧಾನವು ಈ ಕಾಯಿದೆಯಲ್ಲಿ ಹೇಳಲ್ಪಟ್ಟಿದೆ.

೭. ಮನೆ ಕಟ್ಟುವ ಮತ್ತು ಇನ್ನಿತರ ಸಂಘಗಳಲ್ಲಿ ವ್ಯಕ್ತಿಗಳಿಗೆ ಇರತಕ್ಕ ಶೇಅರ ಭಾಂಡವಲಿನ ಮರ್ಯಾದೆಯನ್ನು ಅನುಕ್ರಮವಾಗಿ ೧೦,೦೦೦/–ರೂಪಾಯಿಗಳ ಮತ್ತು ೩೦೦/- ರೂಪಾಯಿಗಳ ವರೆಗೆ ಹೆಚ್ಚಿಸಿದ್ದಾರೆ.

೮. ಕೆಲವು ಕರಾರುಗಳನ್ನು ಪೂರೈಸಿದನಂತರ ಎರಡು ಸಂಘಗಳ ಕೂಡುವಿಕೆಯನ್ನು ( Amalgamation ) ಹೇಳಲಾಗಿದೆ.

## ೨. ಚಳವಳಿಯ ಬೆಳವಣಿಗೆಯ ಸಾರಾಂಶವು.

ಹಿಂದುಸ್ತಾನದಲ್ಲಿ ಸಹಕಾರೀ ಚಳವಳಿಯು ಪ್ರಾರಂಭವಾಗಿ ಸುಮಾರು ೪೫ ವರುಷಗಳಾದವು. ಇಂದಿಗೆ ಈ ಚಳವಳಿಯು ಗಟ್ಟಿಯಾಗಿ ಕಾಲೂರಿ ನಿಂತಿರುವದಲ್ಲದೆ ಎಲ್ಲ ದಿಶೆಗಳಲ್ಲಿಯೂ ಪಸರಿಸಲಾರಂಭಿಸಿದೆ. ಹಿಂದುಸ್ತಾನ ಸರಕಾರದವರು ವರುಷ ವರುಷಕ್ಕೆ ಪ್ರಕಟಿಸುತ್ತಲಿರುವ ಅಂಕೆ ಸಂಖೆಗಳಿಂದ ಇದರ ಭವ್ಯತೆಯ ಸ್ವರೂಪವು ಕಂಡುಬರುವದು. ಸನ್ ೧೯೦೭ರಲ್ಲಿ ೮೪೩ ಸಂಘಗಳಿದ್ದು ೯೦,೮೪೪ ಜನ ಸಭಾಸದರಿದ್ದರು. ದುಡಿಯುವ ಭಾಂಡವಲವು

೨೩.೭೧,೬೮೩|-ರೂಪಾಯಿ ಇದ್ದಿತು. ಸನ್ ೧೯೪೫ ರಲ್ಲಿ ಸಂಘಗಳ ಸಂಖ್ಯೆಯು ೧,೫೯,೬೩೩ಕ್ಕೆ ಮುಟ್ಟಿದ್ದಲ್ಲದೆ ಸಭಾಸದರ ಸಖ್ಯೆಯು ೧,೬೯,೬೮,೭೮೩ಕ್ಕೆ ಇತ್ತು. ದುಡಿಯುವ ಭಾಂಡವಲವು ೧,೪೬, ೬೩,೩೮,೦೦೦ ರೂಪಾಯಿ ಆಗಿತ್ತು

ಮುಂಬಯಿ ಪ್ರಾಂತದಲ್ಲಿ ಮೊಟ್ಟಮೊದಲನೇ ಸಂಘವು (ಧಾರವಾಡ ಜಿಲ್ಲೆಯ ಕಣಗಿನಹಾಳ ಗ್ರಾಮದ ಶೇತಗೀ ಪತ್ತಿನ ಸಂಘವು) ಸನ್ ೧೯೦೫ರಲ್ಲಿ ನೋಂದಾಯಿಸಲ್ಪಟ್ಟು ಅಂದಿನಿಂದ ಚಳವಳಿಯು ಭರದಿಂದ ಬೆಳೆಯುತ್ತ ನಡೆದಿರುವದು.

ಸಹಕಾರಿ ಪತ್ತಿನ ಸಂಘಗಳ ಆದ್ಯ ಪುರಸ್ಕರ್ತರು ಮುಖ್ಯವಾಗಿ ಒಕ್ಕಲತನದ ಪ್ರಶ್ನೆಯನ್ನೇ ಕಣ್ಣುಮುಂದಿರಿಸಿಕೊಂಡು ಒಕ್ಕಲತನದಿಂದಾಗುವ ಹೆಚ್ಚಿನ ಖರ್ಚನ್ನು ಹಿಡಿತದಿಂದ ಕಡಿಮೆಮಾಡುವದರ ಬಗ್ಗೆ ಅವರು ತಮ್ಮ ಗುರಿಯನ್ನಿಟ್ಟುಕೊಂಡಿದ್ದರು. ಆದರೆ ಚಳವಳಿಯು ಈ ತರಹದ ಸಂಕುಚಿತವಾದ ಬಂಧನಗಳಿಗೆ ಒಳಗಾಗಲಿಲ್ಲ. ಹಿಂದುಸ್ಥಾನದಲ್ಲಿ ಔದ್ಯೋಗಿಕ ಜನರ ಬೆಳವಣಿಗೆಯು ನಡೆದೇ ಇರುತ್ತದೆ. ಅವರಲ್ಲಿಯ ಬಹು ಭಾಗದ ಜನರು ಯಾವಾಗಲೂ ಸಾಲದಲ್ಲಿ ಮುಳುಗಿ ಬಿಟ್ಟಿರುತ್ತಾರೆ. ಅವರಿಗೆ ಹಳೇಸಾಲವನ್ನು ತೀರಿಸುವದಕ್ಕಾಗಿಯೂ ಮತ್ತು ಅವಶ್ಯವಾದ ಉದ್ಯೋಗವನ್ನು ಮಾಡುವದಕ್ಕಾಗಿಯೂ ಅಥವಾ ಮನೆತನದ ಅಡಚಣೆಗಳನ್ನು ನೀಗಿಸುವದಕ್ಕಾಗಿಯೂ ಹಣದ ಸಹಾಯದ ಅವಶ್ಯಕತೆಯು ಬರುತ್ತದೆ. . ಕಾರಕೂನರೂ, ಕಾರಾಗೀರರೂ ಮತ್ತು ಇನ್ನಿತರ ದುಡಿಮೆಗಳಿಂದ ಉಪಜೀವನವನ್ನು ಸಾಗಿಸುವ ಜನರೂ ಸುಲಭವಾದ ರೀತಿಯಲ್ಲಿ ತಮ್ಮ ಸಾಲಪರಿಹಾರಕ್ಕಾಗಿ ಸಹಕಾರೀ ಪತ್ತಿನ ಸಂಘಗಳನ್ನು ಮಾಡಿಕೊಂಡಿದ್ದಾರೆ. ಈ ರೀತಿಯಲ್ಲಿ ಚಳವಳಿಯು ಶಹರದ ಭಾಗವನ್ನೂ ಮತ್ತು ಹಳ್ಳಿಯ ಭಾಗವನ್ನೂ ಕೂಡಿಯೇ ವ್ಯಾಪಿಸಿ ಬಿಟ್ಟಿರುವದು. ಹಳ್ಳಿಯ ಸಹಕಾರವು ಸಹ ಬೇರೆ ಬೇರೆ ಮಾರ್ಗಗಳಿಂದ ಮುಂದೊರೆಯುತ್ತಲಿದ್ದು ಪತ್ತೀ

ಮತ್ತು ಇನ್ನಿತರ ಒಕ್ಕಲತನದ ಸಾಲನ್ನು ಮಾರಾಟ ಮಾಡಲಿಕೂ ಹತ್ತಿಯನ್ನು ಅರೆಯುವದಕ್ಕೂ ಮತ್ತು ಗಂಟುಕಟ್ಟುವದಕ್ಕೂ, ಸಂಘ ಗಳುಂಟಾಗಿವೆ. ದನಗಳ ಸಂಗೋಪನೆಗಾಗಿಯೂ ಬೆಳೆಗಳ ಸಂರಕ್ಷಣ ಗಾಗಿಯೂ, ಭೂಮಿಯ ಸುಧಾರಣೆ ಮೊದಲಾದ ಉದ್ದೇಶಗಳಿಗೂ ಸಂಘಗಳುಂಟಾಗಿರುತ್ತವೆ. ಇತ್ತಿತಲಾಗಿ ವಿವಿಧ ಉದ್ದೇಶಗಳ ಸಂಘ ಗಳು ಪ್ರಚಾರದಲ್ಲಿ ಬರಹತ್ತಿರುವವು. ಔದ್ಯೋಗಿಕ ಜನತೆಯಲ್ಲಿ ಕೆಲವು ಸಹಕಾರೀ ಅಂಗಡಿಗಳೂ ಮತ್ತು ಸ್ಟೋರುಗಳೂ ಪ್ರಾರಂಭ ವಾಗಿವೆ. ನೇಕಾರ ಜನರಲ್ಲಿ ನೂಲು ಕೊಂಡಕೊಳ್ಳುವ ಮತ್ತು ಜವಳಿ ಮಾರಾಟಮಾಡುವ ಸಂಘಗಳು ಉಂಟಾಗಿರುತ್ತವೆ. ಇವಲ್ಲದೆ ಇನ್ನಿತರ ಮಾದರಿಯ ಕೆಲವು ಸಂಘಗಳು ಸಾವಕಾಶವಾಗಿ ಕೆಲಸವನ್ನು ಪ್ರಾರಂಭಿಸಿರುವವು.

## ೩. ಸಹಕಾರ (Co-operation)

ಯಾವ ದೇಶವು ಪ್ರಾಚೀನಕಾಲದಲ್ಲಿ ಭೂಪ್ರಷ್ಠದ ಅತ್ಯಂತ ಮಹತ್ವವಾದ ಸುಧಾರಿಸಿದ ರಾಷ್ಟ್ರದಲ್ಲಿ ಪ್ರಾಮುಖ್ಯವಾಗಿ ಎಣಿಸಲ್ಪಡು ತ್ತಿತ್ತೋ, ಯಾವ ದೇಶದಲ್ಲಿಯ ನಿವಾಸಿಗಳು ತಮ್ಮ ಕರ್ತವ್ಯದಕ್ಷತೆ ಯಿಂದಲೂ, ಸ್ವಾವಲಂಬನದಿಂದಲೂ ಬಹಳ ಪರಿಶ್ರಮ ಬಟ್ಟು ನಮ್ಮ ಭರತಖಂಡಕ್ಕೆ " ಸುವರ್ಣಭೂಮಿ " ಈ ಹೆಸರುಗಳನ್ನು ಸಾರ್ಥಕಮಾಡಿ ತೋರಿಸಿದರೋ, ಮತ್ತು ಯಾವ ದೇಶದ ಜನರು ಒಂದಾನೊಂದು ಕಾಲದಲ್ಲಿ ಸೌಖ್ಯಾದ್ರಿಯ ಸ್ವತಂತ್ರವಾದ ಉತ್ತುಂಗ ಶಿಖರದ ಮೇಲೆ ಸ್ವಚ್ಛಂದ ರೀತಿಯಿಂದ ವಿಹರಿಸುತ್ತಿದ್ದರೋ ಅದೇ ದೇಶದಲ್ಲಿ ಅದೇ ವಂಶಿಕರಿಗೆ ಈಗ ಹೊಟ್ಟೆತುಂಬ ತಿನ್ನಲಿಕ್ಕೆ ಜಟ್ಟಣೆ-ರೊಟ್ಟಿಯ ಮತ್ತು ಹೊದ್ದುಕೊಳ್ಳಲು ಸಾಕಷ್ಟು ವಸ್ತ್ರಗಳ ಕೊರತೆಯಾ ಗಬೇಕಂದರೆ ಇದರಂತಹ ಆಶ್ಚರ್ಯಕಾರಕ, ದುಃಖದಾಯಕ ಮತ್ತು ಅನುಕಂಪನೀಯವಾದಂತಹ ಸಂಗತಿಯು ಮತ್ತ್ಯಾವದಿರುವದು ? ಹೀಗಾಗಲಿಕ್ಕೆ ಕಾರಣವೇನಂಬದನ್ನು ಕಂಡುಕೊಳ್ಳುವಾ.

ನಮ್ಮಲ್ಲಿ ಸಾಕಷ್ಟು ಸಹಕಾರವಿಲ್ಲೆಂದು ಖೇದವಾಗಿರುವದು. ಅದರ ಸಂಗಡ ನಮ್ಮ ನೈತಿಕ ಸ್ಥಿತಿಯಾದರೂ ಹೀನದೆಶೆಯನ್ನು ಹೊಂದುತ್ತಲಿರುವದು. ಸಹಕಾರದ ದೃಶ್ಯ ಸ್ವರೂಪವೆಂದರೆ ಈ ಸಹಕಾರೀ ಸಂಘಗಳೆಂದು ಹೇಳಬಹುದು. ಪ್ರತಿಯೊಬ್ಬನು ಈ ಸಂಘಗಳಲ್ಲಿ ಭಾಗ ತೆಗೆದುಕೊಂಡು ತನ್ನ ಬೌದ್ಧಿಕ, ನೈತಿಕ ಮತ್ತು ಆರ್ಥಿಕ ರೀತಿಯಿಂದ ಸಹಾಯಮಾಡಿದಲ್ಲಿ ಅವುಗಳ ಕಾರ್ಯವು ಸುಯಂತ್ರಿತವಾಗಿ ನಡೆದು ಅನೇಕ ತರಹದ ಲಾಭಗಳಾಗುವ ಸಂಭವವಿದೆ. ಸದ್ಯದಲ್ಲಿ ನಾವು ಯಾವ ಸುಧಾರಿಸಿದ ರಾಷ್ಟ್ರಗಳನ್ನು ನೋಡುತ್ತಿರುವೆವೋ ಅವುಗಳ ಉನ್ನತಿಯ ನಿಜವಾದ ಬೀಜವನ್ನು ಹುಡುಕಲು ಹೋದರೆ ಅದು ಸಹಕಾರದಲ್ಲಿರುವದೆಂದು ಕಂಡುಬರದೆ ಇರಲಾರದು. ಸಹಕಾರೀ ಚಳವಳಿಯಿಂದ ಉತ್ಪನ್ನವಾಗುವ ಅಖಿಲ ಭಾರತೀಯ ಸಹಕಾರಿಗಳ ನವಶಕ್ತಿಯ ಮುಂದೆ ಆರ್ಥಿಕ ಅವನತಿ ಅಜ್ಞಾನ ಈ ಪಿಶಾಚಗಳಂತಿರುವ ಹಲಕೆಲವು ಅಡಚಣಿಗಳು ತಲೆ ಎತ್ತಲಾರವೆಂದು ನಿಃಸಂದೇಹವಾಗಿ ಹೇಳಬಹುದು.

ಇನ್ನು ನಾವು ವ್ಯಕ್ತಿಶಃ ಈ ಸಹಕಾರದಲ್ಲಿ ಹೇಗೆ ಭಾಗ ತೆಗೆದುಕೊಳ್ಳಬೇಕೆಂಬದನ್ನು ವಿಚಾರಿಸುವಾ. ನಮ್ಮ ದೇಶದಲ್ಲಿ ಒಕ್ಕಲಿಗರ ಸಂಖ್ಯೆಯು ಬಹಳಿರುವದರಿಂದ ಮೊದಲು ಅವರ ಹಿತದ ಬಗ್ಗೆ ವಿಚಾರಮಾಡುವದು ಅವಶ್ಯದ ಮಾತಾಗಿದೆ. ಶಿಕ್ಷಣದ ಅಭಾವವೊಂದು ಜನರಲ್ಲಿ ಬಹಳಿರುವದು. ಈ ಅಜ್ಞಾನದಿಂದ ಸಹಕಾರೀ ಸಂಘಗಳ ಬಗ್ಗೆ ಅಜ್ಞ ಜನರಲ್ಲಿ ಅನೇಕ ಪ್ರಕಾರದ ವಿಘಾತಕವಾದ ಕಲ್ಪನೆಗಳೂ ಮತ್ತು ತಪ್ಪು ತಿಳುವಳಿಕೆಗಳೂ ಉದ್ಭವಿಸುವ ಸಂಭವವಿದೆ. ಯಾವ ಸಂಸ್ಥೆಯು ನಿಜವಾಗಿ ದೀನ ಮತ್ತು ದರಿದ್ರರ ಉದ್ಧಾರಕ್ಕಾಗಿ ಅವತೀರ್ಣವಾಗಿರುವದೋ ಮತ್ತು ಯಾವದರ ಉದ್ದೇಶವು ಅತ್ಯಂತ ಉಚ್ಚ ತರಗತಿಯುವರ, ಒಕ್ಕಲಿಗರ, ವ್ಯಾಪಾರಿಗಳ, ಕಾರಾಗೀರರ ಮುಂತಾದ

ಜನರ ಕಲ್ಯಾಣದ ಮತ್ತು ಅದರಂತೆ ಯಾವತ್ತೂ ದೇಶದ ಪ್ರಗತಿಂ ಶ್ರೀಯವು ಪ್ರಥಮದಲ್ಲಿ ಯಾವದಕ್ಕೆ ಕೊಡಲು ಬರುವದೋ, ಪರಮ ಪೂಜ್ಯ ಸಹಕಾರೀ ಸೇವೆಯ ಸಮ್ಮಂಧ ಕುತ್ಸಿತ ಭಾವ ಯನ್ನು ತಾಳುವದೆಂದರೆ ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾ ಕೊಂಡಂತೆ ಆಗುವದು. ಆದ್ದರಿಂದ ಈ ನಮ್ಮ ಅಜ್ಞ ಒಕ್ಕಲಿ ಭಾಂಧವರನ್ನು ಸುಶಿಕ್ಷಿತರನ್ನಾಗಿ ಮಾಡುವದು ಪ್ರತಿಯೊಬ್ಬ ತರುಣ ಶಿಕ್ಷಿತ ದೇಶಹಿತಚಿಂತಕನ ಕಡೆಗೆ ಇರುವದು. ಈ ಕೆಲಸವನು ಪ್ರತಿಯೊಬ್ಬನು ಮನಃಪೂರ್ವಕವಾಗಿ ನಿಸ್ವಾರ್ಥಬುದ್ಧಿಯಿಂದ ಮಾಡಿ ದರೆ ಅವರ ತಪ್ಪುತಿಳುವಳಿಕೆಗಳು ಇಲ್ಲದಂತಾಗುವವು. ಆದರೆ ನಮ್ಮ ತರುಣರ (Educated) ಕಡೆಗೆ ದೃಷ್ಟಿಯನ್ನು ತಿರುವಿದರೆ ಏನು ಕಂಡು ಬರುವದು ? ಆ ಸುಶಿಕ್ಷಿತರ ವರ್ಗವು ನಿರಂತರ ಉದಾಸೀನ ಮತ್ತು ನಿರಾಶವಾಗುತ್ತ ನಡೆದಿರುವದು. ಆತ್ಮವಿಶ್ವಾಸ ಮತ್ತು ಧೃಡನಿಶ್ಚಯ ಗಳಿದ್ದದರಿಂದ, ದೀರ್ಘೋದ್ಯೋಗದಿಂದ ಸತತಪರಿಶ್ರಮಬಟ್ಟುಯಾವ ಬಗೆಯ ಕೆಲಸವನ್ನು ಮಾಡಲಿಕ್ಕೆ ಕೂಡ ಅವರಲ್ಲಿ ಉತ್ಸಾಹವು ಕಂಡುಬರುವದಿಲ್ಲ. ಒಂದು ವೇಳೆ ಆತ್ಮವಿಶ್ವಾಸದಿಂದ ಅಶಿಕ್ಷಿತ ಜನರ ಹೃದಯದಲ್ಲಿ ಶಿಕ್ಷಣದ ಪ್ರಕಾಶವನ್ನು ಕೆಡವಿದರೆ ಮಾತ್ರ ಅವರು ದೇಶಹಿತದ ಕಾರ್ಯದ ಬಗ್ಗೆ ಒಂದು ವಿಶಿಷ್ಟವಾದ ಕರ್ತವ್ಯ ವನ್ನು ಮಾಡಿದಂತಾಗುವದೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ಇನ್ನು ಒಕ್ಕಲಿಗರ ವೆಚ್ಚದ ಕಡೆಗೆ ಸ್ವಲ್ಪ ವಿಚಾರ ಮಾಡುವಾ ಅವರಿಗೆ ಕೈ ಬಿಗಿಹಿಡಿದು ಖರ್ಚು ಮಾಡುವ ರೀತಿಯೇ ಗೊತ್ತಿರು ವದಿಲ್ಲ. ತಮ್ಮ ವಾರ್ಷಿಕ ಆದಾಯ ವೆಚ್ಚಗಳ ಅಂದಾಜು ಅವರಿ ಗಿರುವದಿಲ್ಲ. ಹೊಲಗಳಲ್ಲಿ ಬೆಳೆ ಬಂದಕೂಡಲೇ ಸಾಹುಕಾರರ ಕಡೆಗೆ ಹೋಗಿ ಸಾಲತಂದು ಜೈಸಿಯಲ್ಲಿ ದುಡ್ಡು ಹಾಳುಮಾಡು ತ್ತಾರೆ. ಸುಗ್ಗಿಯ ಕಾಲದಲ್ಲಿ ಸಾಹುಕಾರನು ಎಲ್ಲ ಕಾಳುಗಳನ್ನು ತೆಗೆದುಕೊಂಡು ಹೋಗುವದರಿಂದ ಒಕ್ಕಲಿಗನು ಇಡೀವರ್ಷ ಕಷ್ಟ

ಸೋಸಬೇಕಾಗುವದು. ವರ್ಷಾನುವರ್ಷ ಕಷ್ಟಪಟ್ಟರೂ ಒಕ್ಕಲಿಗರಿಗೆ ಸುಖ ದೊರೆಯುವದಿಲ್ಲೆಂದ ಬಳಿಕ ಇದಕ್ಕೇನನ್ನಬೇಕು. ವೇಳೆಗೆ ಸರಿಯಾಗಿ ಸಾವುಕಾರನ ಸಾಲವನ್ನು ತೀರಿಸದೆ ಹೋಗಲು ಒಕ್ಕಲಿಗನು ಪತ್ತುಗೇಡಾಗುವನು. ಅದರಿಂದ ಅವನ ನೀತಿಮತ್ತೆಯು ಕೂಡ ಸಡಿಲಾಗುವದು. ಇದೆಲ್ಲಾ ಸುಮ್ಮ ಸುಮ್ಮನೆ ಖರ್ಚುಮಾಡುವದರ (ಆಟ ನೋಟ ಮುಂತಾದವುಗಳ) ಪರಿಣಾಮವು. ಇದನ್ನೆಲ್ಲ ಕಡಿಮೆಮಾಡಿ ಕೈ ಬಿಗಿಹಿಡಿದು ಖರ್ಚುಮಾಡಿದರೆ ಅವನು ಸಾಲಗೂಳಿಯಾಗಲಾರನೆಂದು ಖಂಡಿತವಾಗಿ ಹೇಳಬಹುದು. ಒಕ್ಕಲಿಗರು ತಮ್ಮ ಕೆಲಸ ಮಾಡಿಕೊಂಡು, ಉಳಿದ ವೇಳೆಯಲ್ಲಿ - ಧನೋತ್ಪಾದಕದ ಬೇರೆ ಬೇರೆ ಕೆಲಸಗಳನ್ನು ಮಾಡಬೇಕು. ದುರ್ವ್ಯಸನಗಳಿಗೆ ಬಲಿ ಬೀಳಬಾರದು. ಕಟ್ಟಕಡೆಗೆ ಆ ಕರುಣಾಘನ ಪರಮಾತ್ಮನ ಚರಣಾರವಿಂದದಲ್ಲಿ ಎಲ್ಲರೂ ಒಟ್ಟುಗೂಡಿ ಬೇಡಿಕೊಂಡು, ಅವನೇ ಮಾನವ ಜಾತಿಗೆ ಕೊಟ್ಟಂತಹ ನಿಸರ್ಗಸಿದ್ಧ ಜ್ಞಾನಶಕ್ತಿಯ ಸಹಕಾರದ ನಿಶಾನೆಯ ಕೆಳಗೆ ಭರತಭೂಮಿಯ ಮೂವತ್ತು ಮೂರು ಕೋಟಿ ಜೀವಿಗಳ “**ತನಗೆಲ್ಲರೆಲ್ಲರಿಗೆ ತಾನೊಲ್ಮೆಯಿಂದಾ । ಅನುವಾಗಿ ಬೆರಸಿಹುದೆ ಸಹಕಾರವೆಂದಾ** ||” ಈ ಸಾಧೂಕ್ತಿಯಂತೆ ಒಬ್ಬರಿಗೊಬ್ಬರು ಸಹಾಯಮಾಡಿ, ದರಿದ್ರತ್ವವೆಂಬ ಶತ್ರುವಿನ ಮೇಲೆ ಜಯಸಂಪಾದಿಸಿ ವೈಭವತ್ವವನ್ನು ತೀವ್ರದಲ್ಲಿ ಕೈವಶ ಮಾಡಿಕೊಳ್ಳುವಲ್ಲಿ ಸಂದೇಹವಿಲ್ಲ.

## Moral Sphere of the Co-op. Movement

## ೪. ಸಹಕಾರದ ನೈತಿಕ ಸ್ವರೂಪವು

“ಪ್ರೇಮದ ದೃಶ್ಯಸ್ವರೂಪವು ಸಹಕಾರವು, ಮತ್ತು ಧರ್ಮದ ಸರ್ವಸಾರವು ಪ್ರೇಮವೆಂದು” ಶ್ರೀ **ಸ್ವಾಮಿ ರಾಮತೀರ್ಥರು** ಒಂದೆಡೆಯಲ್ಲಿ ಹೇಳಿದ್ದಾರೆ. ಈ ದೃಷ್ಟಿಯಿಂದ ಧರ್ಮ, ನೀತಿ ಮತ್ತು

ಸಹಕಾರಗಳು ಒಂದೇ ಅರ್ಥವುಳ್ಳ ಶಬ್ದಗಳಿರುತ್ತವೆಂಬ ಮಾತು ನಿರ್ಶನಕ್ಕೆ ಬರುತ್ತದೆ.

ಸಹಕಾರವು ಮನುಷ್ಯನಿಗೆ ಮನುಷ್ಯತ್ವವನ್ನುಂಟುಮಾಡು ಸಂಜೀವನವಿರುತ್ತದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದ ಇದರಿಂದ ಪ್ರತಿಯೊಬ್ಬನಿಗೆ ತನ್ನ ಸ್ಥಾನ ಮತ್ತು ಯೋಗ್ಯತೆಯುಸ ಕಂಡ:ಹಿಡಿಯಲಿಕ್ಕೆ ಬರುತ್ತದೆ. ಸಮಾಜವಲ್ಲಿ ತಾನು ಎಷ್ಟರಮಟ್ಟಿ ಹಿಂದುಳಿದಿರುವೆನೆಂದು ತಿಳಿದುಕೊಂಡು ಅದರಂತೆ ಸುಧಾರಿಸಲಿಕ ಬರುತ್ತದೆ. ಅದೇ ರೀತಿಯಿಂದ ಪ್ರತ್ಯೇಕ ಘಟಕದ ಉನ್ನತಿಯ ರಾಷ್ಟ್ರೋನ್ನತಿಗೆ ಪೋಷಕವಾಗಿರುತ್ತದೆ. ಸಹಕಾರೀ ಸಂಸ್ಥೆಯ ಸಭಾಸದರೆಂದರೆ ಅವನು ಪ್ರಾಮಾಣಿಕನಿರುವನೆಂದೇ ಗೃಹಿಕೆಯು. ಅವನ ಸಭಾಸದತ್ವವು ಅವನ ಗುಣದ ( ಶೀಲದ ) ಸರ್ಟಿಫಿಕೇಟಾಗಿರುತ್ತದೆ.

ಈ ಮನುಷ್ಯತ್ವವನ್ನು ಪ್ರಾಪ್ತಮಾಡಿಕೊಡುವ ಕಾಮಧೇನವು ತನ್ನನ್ನು ಭಜಿಸುವವರಿಗೆ ಸ್ವತಃಹದ ಸ್ವಾರ್ಥವನ್ನು ಬದಿಗೊತ್ತಿ ವ್ಯಾಪಕ ಮತ್ತು ವಿಶಾಲವಾದ ಸಮಾಜಕ್ಷೇತ್ರದಲ್ಲಿ ಯಾವದು ಹಿತವೋ ಅದೇ ಸಮಾಜದ ಹಿತವೆಂಬ ಬುದ್ಧಿಯಿಂದ ಕೆಲಸಮಾಡಲಿಕ್ಕೆ ಸ್ಫೂರ್ತಿಯನ್ನು ಕೊಡುತ್ತದೆ. ಈ ದೃಷ್ಟಿಯಿಂದ ಸಾಮಾಜಿಕ ತಿಳುವಳಿಕೆಯು ಹೆಚ್ಚಳ ಮತ್ತು ಪರಸ್ಪರರ ವಿಷಯವಾಗಿ ಸಹಾನುಭೂತಿಯು ಸಹಕಾರತ್ವದಿಂದ ಉತ್ಪನ್ನವಾಗಿ ವ್ಯಕ್ತಿ ಸಮಾಜಗಳ ಯೋಗ್ಯಜತೆಯಾಗುವದು.

" ದುಡಿತವು ದುಡ್ಡಿನತಾಯಿಯು " ಎಂಬ ಉಕ್ತಿಯಂತೆ ಉದ್ಯೋಗದ ನಿಜವಾದ ಮಹತ್ವವನ್ನರಿತಾಗ್ಯೂ ನಿರುದ್ಯೋಗದಿಂದ ಕಾಲಹರಣ ಮಾಡುವದು ಲಾಂಛನಾಸ್ಪದವಾದ ಸಂಗತಿಯಾಗಿದೆ. ಉದ್ಯೋಗಮಾಡುವದರಿಂದ ಆಯುಷ್ಯ ಮತ್ತು ವೇಳೆಯ ನಿಜವಾದ

ಬೆಳೆಯು ತಿಳಿಯುವದಲ್ಲದೆ ಕರ್ತೃತ್ವ ಬುದ್ಧಿಯು ಬೆಳೆದು ಆಯುಷ್ಯ ಕ್ರಮದಲ್ಲಿ ಸುಪರಿಣಾಮವನ್ನುಂಟು ಮಾಡದೆ ಬಿಡುವದಿಲ್ಲ.

ಉದ್ಯೋಗವಾಡಿ ಎಷ್ಟೇ ಸಂಪತ್ತು ದೊರಕಿಸಿದಾಗ್ಯೂ ಕಾಟಕ ಸರತನ ಮಾಡುವ ಗುಣವಿಲ್ಲದಿದ್ದರೆ ನಾವು ಕಡೆಗೂ ಭಿಕ್ಷಾಪತಿಗಳೇ ಆಗಿ ಉಳಿಯುವೆವು. ಪ್ರತಿ ತಿಂಗಳಿಗೆ ಒಂದು ಸಾವಿರ ರೂಪಾಯಿ ಗಳ ಗಳಿಕೆಯನ್ನು ಮಾಡಿ ಹನ್ನೆರಡು ನೂರು ರೂಪಾಯಿಗಳನ್ನು ವೆಚ್ಚ ಮಾಡುವದಕ್ಕಿಂತ ನಾಲ್ವತ್ತು ರೂಪಾಯಿಗಳನ್ನು ದೊರಕಿಸಿ ಇಪ್ಪತ್ತೈದು ರೂಪಾಯಿಗಳನ್ನು ಖರ್ಚುಮಾಡುವವನು ಶ್ರೇಷ್ಠತರಗತಿಯವ ನೆಂದೆಣಿಸಲ್ಪಡುತ್ತಾನೆ. ಹತ್ತುರೂಪಾಯಿಗಳಲ್ಲಾಗುವ ಕೆಲಸವನ್ನು ಒಂಬತ್ತೇ ರೂಪಾಯಿಗಳಲ್ಲಿ ಮಾಡಿ ಒಂದು ರೂಪಾಯಿಯನ್ನುಳಿಸು ವದು ಮೊದ ಮೊದಲಿಗೆ ಸ್ವಲ್ಪ ಮನೋ ನಿಗ್ರಹವಾದಂತಾಗುವದು; ಆದರೆ ಹಾಗೆ ಒಮ್ಮೆ ಚಟ ಬಿದ್ದಿತೆಂದರೆ ಅದು ಬಹಳ ಲಾಭದಾಯ ಕವಿರುವದೆಂದು ತಿಳಿದುಬಾರದೆ ಇರದು. ಕಾಟಕಸರ ಅರ್ಥಾತ್ ಮಿತವ್ಯಯ ಮತ್ತು ಗಳಿಕೆಯ ಉಳಿವಿಕೆಯು ಸಹಕಾರೀ ಸಂಸ್ಥೆಗಳಲ್ಲಿ ರುವ ಪ್ರತಿಯೊಬ್ಬ ಸಭಾಸದನಿಗೆ ಗೊತ್ತಿರುತ್ತವೆಂದು ಬೇರೆ ಹೇಳಲು ಕಾರಣವಿಲ್ಲ.

ಈ ಪ್ರಕಾರ ವರ್ತನವುಳ್ಳ ಮನುಷ್ಯನು ನಿಜವಾಗಿ ಸ್ವಾವಲಂಬಿ ಯಾಗಿ ತನ್ನ ಜವಾಬದಾರಿಯನ್ನು ಕಂಡುಹಿಡಿದು ಒಮ್ಮೆ ತನ್ನ ಆದಾಯಮಾನದಿಂದ ಖರ್ಚುಮಾಡುವ ಮತ್ತು ಉಳಿವಿಕೆಯ ಸವಿ ಹತ್ತಿದರೆ ಸ್ವಂತ ಕಾಲಮೇಲೆ ಎದ್ದು ನಿಲ್ಲುವ ಕಸುವು ಬಂದೇ ಬರು ತ್ತದೆ. ಪರಾವಲಂಬಿಯಾಗುವದು ಅಥವಾ ಅಪ್ತೇಷ್ಟರ ಮಾತಿಗೆ ಎರ ಡನೇಯವರ ಮೋರೆಯ ಕಡೆಗೆ ನೋಡುವ ಪ್ರಸಂಗವು ಬಹು ಘಾತು ಕವೆಂದು ಗೊತ್ತಾಗುವದಲ್ಲದೆ ಅವನ ಆತ್ಮ ವಿಶ್ವಾಸವು ಹೆಚ್ಚುತ್ತದೆ.

ಸರ್ವ ಸದ್ಗುಣಗಳನ್ನು ಯೋಗ್ಯರೀತಿಯಿಂದ ವಿಕಾಶಪಡಿಸು ವದೇ ಸಹಕಾರೀ ಧರ್ಮದ ಸಾಂಪ್ರದಾಯವಿರುತ್ತದೆ. ಇದರಿಂದ

ಸ್ವಪ್ರೋಕ್ತಿಯ ಸ್ವಭಾವವು ಬರುತ್ತದೆ. ತನ್ನ ಶೀಲವು (Character ಉತ್ತಮರೀತಿಯಿಂದ ಸುಧಾರಿಸುವ ತನಕ ಮೇಲಿಂದ ಮೇಲೆ ಅವನ ಚಲೋ ಕೆಲಸಗಳನ್ನು ಮಾಡಬೇಕಾಗುತ್ತದೆ. ಇದರಂತೆ ಮಾಡುತ್ತ ಹೋದರೆ ತಪ್ಪಿನಿಂದ ಒಮ್ಮೆಯಾದರೂ ಸಹ ಸುಳ್ಳಾಡುವ ಅಥವಾ ಕೆಟ್ಟ ಕೆಲಸ ಮಾಡುವದು ಅವನಿಂದ ಘಟಿಸುವದಿಲ್ಲ.

ಮೇಲೆ ಉಲ್ಲೇಖಿಸಿದ ಯಾವತ್ತೂ ಸಂಗತಿಗಳು ಒಕ್ಕಲಿಗರ ವರ್ಗಕ್ಕೆ ತಿಳಿಯುವದಕ್ಕೋಸ್ಕರ ಶಿಕ್ಷಣದ ಅತ್ಯಂತ ಅವಶ್ಯಕತೆ ಇರುವದು. ಸಹಕಾರೀ ಸಂಸ್ಥೆಗಳಲ್ಲಿ ಹಣದ ಲೇವಾದೇವಿ ಇರುವ ಮೂಲಕ ಆರ್ಥಿಕ ಪರಿಸ್ಥಿತಿಯು ಸುಧಾರಿಸುವದು. ಇದು ಸಹಕಾರಿಗಳ ಲಾಭದ ದೃಷ್ಟಿಯಿಂದ ರೂಪಾಯಿಯಲ್ಲಿ ಎರಡು ಆಣೆ ಇರುತ್ತದೆ. ಬುದ್ಧಿ, ಬಲ, ವ್ಯಾಪಾರ ಮತ್ತು ಉದ್ಯೋಗಗಳಲ್ಲಿ ಇತರ ರಾಷ್ಟ್ರಗಳಿಗೆ ಸರಿಯಾಗಲಿಕ್ಕೆ ಸಹಕಾರೀ ತತ್ವದ ಮೇಲಿಂದ ಸರ್ವ ಭಾಗಗಳಲ್ಲಿಯೂ ಉನ್ನತಿಯಾಗಬೇಕು. ಮುಖ್ಯವಾಗಿ ನೈತಿಕ ಸಾಮರ್ಥವಿಲ್ಲದೆ ಬೇರೆ ಯಾವ ಸಾಧನಗಳೂ ಉಪಯೋಗವಾಗಲಾರವೆಂದು ಸಹಕಾರ್ಯಾಂತರ್ಗತ ನೈತಿಕತ್ವವನ್ನು ವಿಕಾಶಪಡಿಸಿ ತಾವು ತಮ್ಮ ಮತ್ತು ಪರ್ಯಾಯದಿಂದ ಸಮಾಜ, ರಾಷ್ಟ್ರ ಮತ್ತು ದೇಶಗಳ ಉನ್ನತಿಯನ್ನು ಮಾಡಲಿಕ್ಕೆ ಬೇಕು.

## ೫. ಸಹಕಾರೀ ಚಳವಳಿಯ ಅನುಭವ.

## Co-operation experience

ಸಹಕಾರೀ ಚಳವಳಿಯಿಂದ ಹಿಂದುಸ್ಥಾನದ ಆರ್ಥಿಕ ಮತ್ತು ಔದ್ಯೋಗಿಕ ದಾರಿದ್ರ್ಯವು ನಷ್ಟವಾಗುವದೆಂದು, ಅದಕ್ಕೆ ತನು, ಮನ, ಧನಗಳನ್ನು ಅರ್ಪಿಸಿದಂತಹ ದೊಡ್ಡ ದೊಡ್ಡ ವಿದ್ವಾನ್ ಗೃಹಸ್ಥರ ಮುಖದಿಂದ ಬಹುಸಾರೆ ಉದ್ಗಾರಗಳು ಹೊರಟಿರುತ್ತವೆ. ಈ ಸಂಗತಿಯು ನಿಜವಿದ್ದು, ದರಿದ್ರತ್ವವು ನಷ್ಟವಾಗಲಿಕ್ಕೆ ಸಹಕಾರದ ತತ್ವಗಳು ಸಮಾಜದ ಘಟಕಾವಯವಗಳಲ್ಲಿ ಪರಿಪೂರ್ಣವಾಗಿ ಬಿಂಬಿ

ಸುವದು ಅವಶ್ಯವಿರುತ್ತದೆ; ಮತ್ತು ಈ ತತ್ವವನ್ನು ಹಳ್ಳಿಪಳ್ಳಿಗಳಲ್ಲಿದ್ದ ನಿರಕ್ಷರಿ ಮತ್ತು ಹಳೇ ಪದ್ಧತಿಯನ್ನು ಹಿಂಬಾಲಿಸುವಂತಹ ಜನರ ಮನದಲ್ಲಿ ನೆಲೆಗೊಳಿಸಲಿಕ್ಕೆ ಶಕ್ಯವಿದ್ದಷ್ಟು ಪ್ರಯತ್ನಮಾಡುವದು ಪ್ರತಿಯೊಬ್ಬ ಸಹಕಾರಿಯ ಆಧ್ಯಕರ್ತವ್ಯವಾಗಿರುತ್ತದೆ. ಆದರೆ ಈ ಮಾತು ಆಗತಕ್ಕಷ್ಟು ಆಗಿಲ್ಲವೆಂದು ಅತಿ ಕಷ್ಟದಿಂದ ಅನ್ನಬೇಕಾಗಿರುವದು.

ಕಳೆದ ೧೦-೨೦ ವರ್ಷಗಳಲ್ಲಿಯ ಸಹಕಾರೀ ಚಳವಳಿಯ ಕಡೆಗೆ ದೃಷ್ಟಿಯನ್ನೆಸೆದರೆ, ಈ ಯಾವತ್ತೂ ಚಳವಳಿಯು ಸದ್ಯದಲ್ಲಿ ಮುಖ್ಯವಾಗಿ ಒಂದೇ ದಿಕ್ಕಿನಲ್ಲಿ ಮಾರ್ಗಕ್ರಮಣ ಮಾಡುತ್ತಿರುವಂತೆ ಕಂಡುಬರುತ್ತದೆ. ಅಂದರೆ ಯೋಗ್ಯ ಮತ್ತು ಬುದ್ಧಿವಾನಾ ಮಂಡಳಿಯು ಒಟ್ಟುಗೂಡಿ, ಪರಸ್ಪರರ ವಿಚಾರವಿನಿಮಯವನ್ನುಮಾಡಿ ಅವರು ಅದಕ್ಕೆ ದ್ರವ್ಯದ ವಿಷಯದಲ್ಲಿ ಸಂಘಟನಾತ್ಮಕ ಸ್ವರೂಪವನ್ನು ಕೊಟ್ಟಿದ್ದಾರೆ. ಶಿಕ್ಷಣದ ದೃಷ್ಟಿಯಿಂದ ಪ್ರತಿವರ್ಷ ಪರಿಷತ್ತು, ಸಮ್ಮೇಲನ ಮತ್ತು ಸಂಘಗಳ ವಾರ್ಷಿಕ ಸಭೆ ನೆರೆಯಿಸಿ ಸಹಕಾರೀ ಸಂಘಗಳ ಮತ್ತು ಅವುಗಳ ಸಭಾಸದರ ಕಲ್ಯಾಣಕ್ಕಾಗಿ ಅನೇಕ ಠರಾವುಗಳು ಪಾಸಾಗಿರುವವು. ಮತ್ತು ಪಾಸಾಗುತ್ತಿರುವವು. ಮುಂಬಯಿ ಸರಕಾರೀ ಇನ್‌ಸ್ಟಿಟ್ಯೂಟದ ವತಿಯಿಂದ ಬೇರೆ ಬೇರೆ ತರದ ಹಸ್ತಪತ್ರಿಕೆಗಳು ಪ್ರಕಟವಾಗಿ ಆ ಸಂಸ್ಥೆಯಿಂದ ೪-೬ ಭಾಷೆಗಳಲ್ಲಿ ದರ ತಿಂಗಳ ಮಾಸಪತ್ರಿಕೆಗಳು ಹೊರಟು ಸಂಘಗಳ ಸಭಾಸದರಿಗೆ ಉಪದೇಶವನ್ನು ಬೀರುತ್ತಲಿರುವದು. ಈ ಯಾವತ್ತು ಪ್ರಕಾರದ ಸಿದ್ಧತೆಯು, ಚಳವಳಿಯಲ್ಲಿ ಕಳಕಳಿಯಿಂದ ಕೆಲಸ ಮಾಡುವ ಬುದ್ಧಿವಂತ ಮಂಡಳಿಯಿಂದ ಆಗುತ್ತಿದ್ದು ಅದರ ಪರವಾಗಿ ಅವರಿಗೆ ಎಷ್ಟು ಧನ್ಯವಾದನ್ನರ್ಪಿಸಿದರೂ ಕೂಡ ಸ್ವಲ್ಪೇ ಇರುತ್ತದೆ.

ಮೇಲೆ ಉಲ್ಲೇಖಿಸಿದ ಮೇರೆಗೆ ಸದ್ಯಕ್ಕೆ ಅಸ್ತಿತ್ವದಲ್ಲಿರುವಂತಹ ಸಹಕಾರೀ ಸಂಘಗಳ ಸಭಾಸದರಿಗೆ ಸಹಕಾರದ ತತ್ವಗಳು ಎಷ್ಟರ

ಮುಟ್ಟಿಗೆ ತಿಳಿದಿರುತ್ತವೆನ್ನುವದು ನೋಡತಕ್ಕ ಮಾತಾಗಿ: ಎರಡನೇ ಸಾವುಕಾರರಿಗಿಂತ ಕಡಿಮೆ ಬಡ್ಡಿಯಿಂದ ಹಣವ: ಪೂರೈಸುವ ಇವನೊಬ್ಬ ದೊಡ್ಡ ಸಾವುಕಾರನೆಂದೇ ಕೆಲವರ ಗ್ರಹಿ ಯಾಗಿರುತ್ತದೆ. ಸಹಕಾರೀ ಸಂಘಗಳಲ್ಲಿ ಅಥವಾ ಬ್ಯಾಂಕುಗಳ ಸಾಲತೆಗೆದುಕೊಳ್ಳುವದರಿಂದ ತಾವೇನೂ ನೀತಿ ತತ್ವಗಳಿಂದ ಬಂ ಸಲ್ಪಡಲಾರೆವೆಂದು ಅವರ ತಿಳುವಳಿಕೆ. ಇದಲ್ಲದೆ, ಮೇಲಿಂ. ಮೇಲೆ ಇನ್‌ಸ್ಪೆಕ್ಟರ, ಆಡಿಟರ ಮೊದಲಾದ ಅಧಿಕಾರಿಗಳು ಬಂದ ನಯನುಡಿಯ ಮಾತುಗಳನ್ನಾಡುವದರಿಂದ ಸರಕಾರವು ನಮಗೊ ಸ್ಕರ ಅಗತ್ಯವಿದ್ದ ಕೆಲಸವನ್ನು ಮಾಡುತ್ತಲಿದೆಯೆಂದು ಕೆಲವರ ಅನುಮಾನವಾಡುವರು. ಸೆಕ್ರೆಟರಿ ಅಥವಾ ಚೇರಮನ್ನರು ಕೇ ವೊಂದು ಜರೂರಿಯ ಕೆಲಸಕ್ಕಾಗಿ ಸಭೆ ಕರೆದರೆ ಬಹುಮಂದಿ ಬರು ವದೇ ಇಲ್ಲ. ತಮ್ಮ ಸಾಲ ಮನ್ನೆರಿ ಬೇಡುವದಿದ್ದರೆ ಮಾತ್ರ ತಪ್ಪದೆ ಹಾಜರಾಗುವರು. ಯಾವತ್ತೂ ಸ್ಥಳಗಳಲ್ಲಿ ಇದೇ ಸ್ಥಿತಿಯು ಇರು ತ್ತದೆಂದು ಅನ್ನಲಾಗದು. ಆದರೂ ಒಂದಿಲ್ಲೊಂದು ರೀತಿಯಿಂದ ಸಹಕಾರ ತತ್ವಗಳು ಅವರಿಗೆ ತಿಳಿದಿರುವದಿಲ್ಲೆಂದು ನಿರ್ವಿವಾದವಾಗಿ ಹೇಳಬಹುದು.

ಹಳ್ಳಿಯೊಳಗಿನ ಒಕ್ಕಲಿಗರ ವರ್ಗದವರು ಸಾಧಾರಣವಾಗಿ ತಮಗೆ ಗರಜುಬಿದ್ದ ಸಮಯದಲ್ಲಿ ಮಾತ್ರ ಬೇಕಾದಂತಹ ಕರಾರುಗ ಳಿಗೆ ಒಪ್ಪುವರು. ಅಡಚಣಿಯ ಪ್ರಸಂಗದಲ್ಲಿ, ಅವನು ಒಬ್ಬ ಮಾರವಾಡೀ ಸಾವುಕಾರನ ಹತ್ತರ ಹೋಗಿ, ೧೦೦ಕ್ಕೆ ಹತ್ತರಂತೆ ಬಟ್ಟಾ ೪-೮ ಆಣೆ ಧರ್ಮಾದಾಯ, ೧‖-೨ ರೂಪಾಯಿ ಬಡ್ಡಿ, ಇಷ್ಟ ಕ್ಕೆಲ್ಲಾ ಒಪ್ಪಿಕೊಂಡು ಮೇಲೆ ಜಮೀನುಗಳನ್ನು ಒತ್ತಿ ಬರಕೊಡು ವನು. ಕಳೆದ ೨-೩ ವರುಷಗಳಲ್ಲಿ ಬೆಳೆಯಿಲ್ಲದರ ಸಲುವಾಗಿ ಈ ಪ್ರಕಾರದ ಉದಾಹರಣೆಗಳು ಅಲ್ಲಲ್ಲಿಗೆ ಕಂಡುಬರುತ್ತಲಿವೆ. ಎರಡನೇ ಕಡೆಯಿಂದ ನೋಡಿದರೆ ದರ ವಾರಕ್ಕೆ ೨ಆಣೆ ಪ್ರಕಾರ ಸಹಿತ ಠೇವಿ

ಡಲಿಕ್ಕೆ ಸಭಾಸದರು ತಯಾರಿರುವದಿಲ್ಲೆಂಬ ಸಂಗತಿಯು ಕಳೆದ ಹಲವು ವರ್ಷಗಳಿಂದ ಅನುಭವವಾಗಿರುತ್ತದೆ.

ಆದ್ದರಿಂದ ಯಾವತ್ತೂ ಸಭಾಸದರು ಕೆಳಗೆ ಬರೆದ ಸೂಚನೆಗಳನ್ನು ಅಮಲಿನಲ್ಲಿ ತರಬಹುದೆಂದು ನನ್ನ ಧೃಡ ನಂಬಿಗೆಯದೆ. ಈ ಸೂಚನೆಗಳ ಮೇಲೆ ಚರ್ಚೆಯಾದಲ್ಲಿ ಉಪಯುಕ್ತವೆನಿಸುವದು.

(೧) ಪ್ರತಿಯೊಂದು ಸಂಘವು ಬಹುಮತದಿಂದ ಠರಾವು ಪಾಸುಮಾಡಿ ತಮ್ಮ ಹಿತಕ್ಕೋಸ್ಕರ ಒಂದು ನಿಧಿಯನ್ನು ತೆಗೆಯಬೇಕು. (೨) ಸಾಲವನ್ನು ಕೊಡುವ ಸಮಯಕ್ಕೆ ಸದರೀ ನಿಧಿಗೆ ೧೦೦ ಕ್ಕೆ ೧ ರಂತೆ ಹಣವನ್ನು ವಸೂಲ ಮಾಡಬೇಕು. (೩) ನಿಧಿಯ ಹಣವನ್ನು ತಮ್ಮ ಸಂಘದಲ್ಲಿಯೇ ಠೇವಾಗಿ ಇಟ್ಟುಕೊಳ್ಳಬೇಕು. (೪) ನಿಧಿಯ ವಿನಿಯೋಗವು ಸಭಾಸದರ ಬಹುಮತದಿಂದ ಅವರ ಹಿತದ ಸಲುವಾಗಿಯೇ ಪಂಚಕಮಿಟಿಯ ಪರವಾಗಿ ಆಗಬೇಕು. (೫) ನಿಧಿಯ ಸಮೃದ್ಧಿಯುಕ್ಕೋಸ್ಕರವಾಗಿ ಸಂಘದಿಂದ ಮೇಲಿಂದ ಮೇಲೆ ಸಲಹೆ ಸಿಗುತ್ತಿರಬೇಕು. (೬) ಸಾಧ್ಯವಾದರೆ ಅದರಿಂದ ರೈತರಿಗೆ ಉಪಯೋಗ ಬೀಳುವ ಸಾಮಾನುಗಳನ್ನು ಸೋವಿ ದರದಿಂದ ತಂದುಕೊಡಬೇಕು. (೭) ಹಳ್ಳಿಗಳಲ್ಲಿ ವಾಸಿಸುವ ಸಂಘದ ಕಾರ್ಯಕಾರೀ ಮಂಡಳ ಸಭಾಸದರಿಗೆ ಈ ಯೋಜನೆಯನ್ನು ಅಮಲಿನಲ್ಲಿ ತರುವಂತೆ ಸೌಮ್ಯದಿಂದ ಸೂಚಿಸಬೇಕು (೮) ನಿಧಿಯ ವ್ಯವಹಾರದ ಮೇಲೆ ಸಂಘದಿಂದಲೂ ಬ್ಯಾಂಕಿನಿಂದಲೂ ಮೇಲಿಂದ ಮೇಲೆ ತಪಾಸಣೆಯಾಗುತ್ತಿರಬೇಕು; ಮತ್ತು (೯) ಬ್ಯಾಂಕಿನ ನೌಕರರೂ ಉಳಿದ ಸದ್ಗೃಹಸ್ಥರೂ ನಿಧಿಯ ಲೆಕ್ಕಪತ್ರಗಳನ್ನಿಡಲಿಕ್ಕೆ ಸಹಾಯ ಮಾಡಬೇಕು.

ಮೇಲಿನ ಯೋಜನೆಯಂತೆ ಅಥವಾ ಅವರಲ್ಲಿಯೇ ವ್ಯವಸ್ಥಾಪಕ ಕಮಿಟಿಯವರು ಯುಕ್ತಾಯುಕ್ತ ಹೆಚ್ಚುಕಡಿಮೆ ಮಾಡಿ ಅಮಲಿನಲ್ಲಿ

ತಂದರೆ ಸಂಘದ ಸಭಾಸದರಿಗೆ ಪ್ರತ್ಯಕ್ಷ ಲಾಭವನ್ನು ದೊ ಕೊಟ್ಟಂತಾಗುವದು.

ಈ ಸ್ಥಳದಲ್ಲಿ ೧—೨ ಮಹತ್ವದ ಸೂಚನೆಗಳನ್ನು ಹೆ ತ್ತೇವೆ. ಹಲಕೆಲವು ಸಂಘಗಳ ಚೇಅರಮನ್ನ ಮತ್ತು ಸೆಕ್ರೇ ಗಳೇ ಸಂಘದ ಸಾಲದ ಹಣದಲ್ಲಿ ಅರ್ಧಕ್ಕಿಂತ ಹೆಚ್ಚಿಗೆ ತಾವು ತಕ್ಕೊಂಡು ಉಳಿದ ಸಭಾಸದರಿಗೆ ಏನಾದರೊಂದು ನೆವ ಹೇಳಿ ಅ ಅಡಚಣಿಯನ್ನು ಪೂರ್ಣವಾಗಿ ಪೂರೈಸುವದಿಲ್ಲ. ಮತ್ತೊಂದು ಸ ತಿಯೇನಂದರೆ : ಸಂಘದ ವಿಷಯಕ್ಕೆ ಇಲ್ಲದೊಂದು ಕುಕಲ್ಪನೆಗಳ ಸಹಕಾರ ದ್ವೇಷಕರು ಜನರಲ್ಲಿ ಹಬ್ಬಿಸುವದು ಇವೆರಡು ಸಂಗ ಳಿಂದ ಸಂಘಕ್ಕೆ ಧಕ್ಕೆ ತಗಲದಂತೆ ಸಭಾಸದರು ಜಾಗರೂಕ ಗಿರಬೇಕು.

## ೬. **ಸಹಕಾರ ಮಹಾತ್ಮ್ಯ.**

## The Greatness of Co-operation

ಈ ಜಗತ್ತಿನಲ್ಲಿ ಸಹಕಾರ ಬಲದ ಜೋರಿನಿಂದ ದೊಡ್ಡ ದೊ ಕಾರ್ಯಗಳು ನಿರಾಯಾಸವಾಗಿ ಕೈಗೂಡುವೆವೆಂಬ ಸಂಗತಿಯು ಎ ರಿಗೂ ಗೊತ್ತಾದಮಾತೇ ಸರಿ. ಸಹಕಾರದ ಉಗಮಸ್ಥಾನವು ಮತ್ತು ಸಹಕಾರಿಗಳ ಪೂರ್ಣ ಮತ್ತು ದೃಶ್ಯಸ್ವರೂಪವು ಪ್ರೇಮವೆಂ ಸಂಗತಿಯನ್ನು ಶ್ರೀ **ಸ್ವಾಮಿ ರಾಮತೀರ್ಥರು** ತಮ್ಮ ಗ್ರಂಥದಲ್ಲಿ ಹೇಳಿರುವದು ಅಕ್ಷರಶಃ ಸಿಜವಿರುತ್ತದೆ. ಪ್ರೇಮ ಮತ್ತು ಸಹಕಾ ಗಳು ಯಾವಾಗಲೂ ಒಂದನ್ನೊಂದು ಅಗಲದೆ ಪರಸ್ಪರಾವಲಂಬಿ ಗಳಿರುವವು. ಪ್ರೇಮದ ವಿನಹ ಸಹಕಾರವು ಉತ್ಪನ್ನವಾಗುವದಿಲ್ಲ; ಮತ್ತು ಸಹಕಾರೀ ವೃತ್ತಿಯ ವಿನಹ ಪ್ರೇಮದ ತಿಳುವಳಿಕೆಯಾಗು ವದು ಶಕ್ಯವಿರುವದಿಲ್ಲ. ಈ ಪ್ರಕಾರದ ಭಾವನೆಯಾಗಲಿಕ್ಕೆ ಚಿತ್ತ ಶುದ್ಧಿಯು ಅತ್ಯಂತ ಅವಶ್ಯವಾಗಿರುತ್ತದೆ; ಮತ್ತು ಚಿತ್ತಶುದ್ಧಿಗೆ ಮನೋ ನಿಗ್ರಹವು ಬೇಕಾಗುತ್ತದೆ.

ಸಹಕಾರ ತತ್ವದ ಮೇಲೆ ಉನ್ನತಿಯನ್ನು ಮಾಡಿಕೊಳ್ಳುವದರಲ್ಲಿ, ಜನರ ಐಹಿಕ ಮತ್ತು ಪಾರಮಾರ್ಥಿಕ ಮೂಲವಿರುತ್ತದೆಂಬ ಸಂಗತಿಯು ಸರ್ವ ಸಮ್ಮತವಾಗಿರುತ್ತದೆ. ಶೀಲ ಸಂವರ್ಧನದ ವಿಸ್ತೃತ ಮತ್ತು ವ್ಯಾಪಕವಾದ ಉದ್ದೇಶದಿಂದ ಸಹಕಾರೀ ಚಳವಳಿಯು ಉದಯಕ್ಕೆ ಬಂದಿರುತ್ತದೆ. ಬಡವರ ಮತ್ತು ಸಮಾನಸ್ಥಿತಿಯುಳ್ಳ ಜನರನ್ನು ಉದ್ಧಾರಮಾಡುವ ಧ್ಯೇಯವನ್ನು ಮುಂದಿಟ್ಟುಕೊಂಡು ಲೋಕಸತ್ತೆಯ ಅಥವಾ ಪ್ರಾತಿನಿಧಿಕ ತತ್ವದ ಮೇಲೆ ವಿಶುದ್ಧ ಸಂಘಟನೆಯನ್ನು ಮಾಡುವ ರೀತಿಯನ್ನು ಇದೇ ಚಳವಳಿಯು ನಮ್ಮ ದೇಶದಲ್ಲಿ ಹರಡಿಸಿರುತ್ತದೆ. ಇದರಿಂದ ಆಧುನಿಕ ಸುಧಾರಣೆಯ ಹೊಡೆತಕ್ಕೆ ಮುಗಿಬೀಳದೆ ಪಾಶ್ಚಾತ್ಯರ ಅಧಿಭೌತಿಕ ಸುಧಾರಣೆಯ ಸಂಗಡ ಪೂರ್ವ ಸಂಸ್ಕೃತಿಯ ಯೋಗ್ಯ ಮತ್ತು ಅಚ್ಚುಕಟ್ಟಾದ ಕೂಡುವಿಕೆಯಾಗಿರುತ್ತದೆ. ಪರಸ್ಪರ ವಿರುದ್ಧವಾಗಿ ಅನಿರ್ಬಂಧದಿಂದ ಹರಿಯುತ್ತಿರುವ ವಿಚಾರ ಪ್ರವಾಹಗಳನ್ನು ಯೋಗ್ಯರೀತಿಯಿಂದ ಸರಿಪಡಿಸಿ ಆಯಾ ಭಾಗಗಳಲ್ಲಿ ಅಂದವಾದ ತತ್ವಗಳ ಸತ್ಯಾನ್ವೇಷಣದಿಂದ ಸರ್ವೋಪಯೋಗಿ, ಸರ್ವಸಮ್ಮತ ಮತ್ತು ಸಿದ್ಧಾಂತರೂಪವಾದ ರಾಜಮಾರ್ಗವನ್ನು ಸಿದ್ಧಮಾಡುವದು ಸಹಕಾರೀ ಚಳವಳಿಯ ಉದ್ದೇಶವಿರುತ್ತದೆ. ರಾಕ್ಷಸೀ ಸತ್ತೆಯ ಪ್ರತಿಕಾರವನ್ನು ಮಾಡುವ ಸಾಮರ್ಥ್ಯವು ಈ ಸರ್ವಸಮ್ಮತವಾದ ಚಳವಳಿಯಲ್ಲಿ ನಿಶ್ಚಯದಿಂದ ವಾಸಮಾಡಿರುತ್ತದೆ. ಆದ್ದರಿಂದ ಇದರಲ್ಲಿ ಮತಭೇದ ವಿರುವದಿಲ್ಲ, ಧ್ಯೇಯದ ವಾದವಿರುವದಿಲ್ಲ, ಮತ್ತು ಯಾವದೇ ಒಂದು ಅಯೋಗ್ಯ ಮಾತಿಗೆ ಸ್ವಲ್ಪಾದಗೂ ಅವಕಾಶವಿರುವದಿಲ್ಲ. "ಯಲ್ಲಿ ದರ್ಮವೋ ಅಲ್ಲಿ ಜಯ" ವೆಂಬ ಶ್ರೀ ಭಗವದುಕ್ತಿಯಂತೆ ಈ ಚಳವಳಿಯ ಬೆನ್ನ ಮೇಲೆ ಜಯವು ನಿರಂತರ ವಾಸಮಾಡುತ್ತದೆ.

ಸದ್ಯದಲ್ಲಿ ರಾಷ್ಟ್ರ ಕೆಲಸದ ಮತ್ತು ಸ್ವಂತ ಉನ್ನತಿಯ ನೆವದಿಂದ ಎಷ್ಟೋ ಪ್ರಕಾರದ ಚಳವಳಿಗಳೂ, ಪಂಥಗಳೂ ಹುಟ್ಟುತ್ತಿ

ಮತ್ತು ಮತಭೇದದಿಂದ ಅಥವಾ ಮತ್ತೆ ಬೇರೆ ಯಾವದೇ ಕಾರಣ ದಿಂದ ಅವುಗಳ ಉದ್ದೇಶವು ಸಾಫಲ್ಯವಾಗದೆ ಅವುಗಳ ಅಸ್ತಿತ್ವವು ಸಿದ್ಧವಾಗುವ ಮೊದಲೇ ಲಯವಾಗುತ್ತಿರುವದನ್ನು ನಾವು ನೋಡುತ್ತ ಲಿದ್ದೇವೆ. ಸಹಕಾರೀ ಚಳವಳಿಯು ಆ ಪ್ರಕಾರದ್ದಿರುವದಿಲ್ಲ. ಇದು ಒಂದೇ ವಿಶಿಷ್ಟವಾದ ಉದ್ದೇಶದಿಂದ ಜನ್ಮಕ್ಕೆ ಬಂದಿರದೆ ಯಾವದೇ ಜನಾಂಗದ, ಯಾವದೇ ಪಂಥದ, ಯಾವದೇ ಜಾತಿಯ ಉತ್ತಮ ವಾದ ಕಾರ್ಯಕ್ಕೆ ಇದರ ಉಪಯೋಗವನ್ನು ಮಾಡಿದರೆ ಉದ್ದೇ ಶವು ಸಫಲವಾಗದೆ ಹೋಗಲಿಕ್ಕಿಲ್ಲ. ಯಾವತ್ತೂ ಪ್ರಕಾರದ ಉನ್ನ ತಿಯ ಮೂಲವು ಮತ್ತು ಯಾವತ್ತೂ ಚಳವಳಿಗಳ ಯಶೋ ಬೀಜವು ಈ ಚಳವಳಿಯಲ್ಲಿ ಸಿಗುವದು.

ಸಹಕಾರದ ಮಹಾತ್ಮ್ಯವನ್ನು ವೇದಗಳು ಸಹ ಹೊಗಳಿರು ತ್ತವೆ. ಭವಿಷ್ಯಕಾಲದಲ್ಲಿ ಸಹ ಸಂಘಶಕ್ತಿಯು ಅತ್ಯಂತ ಪ್ರಭಾವ ಶಾಲಿಯಾಗುವದೆಂಬದರಲ್ಲಿ ಸಂದೇಹವಿಲ್ಲ. ಕಲಿಯುಗದಲ್ಲಿ ಸಹ ಕಾರವು ಕಾಮಧೇನುವಾಗಿರುತ್ತದೆ. ಮರಣೋನ್ಮುಖ ರಾಷ್ಟ್ರಕ್ಕೆ ನವ ಜೀವವನ್ನುಂಟುಮಾಡುವ ಸಂಜೀವಿನಿಯಾಗಿರುತ್ತದೆ. ಸಮಾನ ಭಾವದ ತಳಹದಿಯ ಮೇಲೆ ಸಂಘಟನಾತ್ಮಕ ಉನ್ನತಿಯನ್ನು ಮಾಡು ವಂತಹ ಮತ್ತು ರಾಕ್ಷಸೀ ಸತ್ತೆಗೆ ವಿರೋಧಿಸುವಂತಹ ನಿಸರ್ಗ ದೇವ ತೆಯಾಗಿರುತ್ತದೆ. ಪರಸ್ಪರರಲ್ಲಿರುವ ಜಗಳ, ಬಡಿದಾಟ ಮುಂತಾದವು ಗಳು ಉಪಸ್ಥಿತವಾದ ಕಾಲದಲ್ಲಿ ಸರ್ವತ್ರ ಶಾಂತತೆಯನ್ನು ಪ್ರಸ್ಥಾಪಿ ತಮಾಡಿ ವಿಜಯವನ್ನು ಕೊಡುವ ರಣದೇವತಾ ಸ್ವರೂಪವಾಗಿರುತ್ತದೆ.

ಧಾರ್ಮಿಕ ಭಾವನೆಯ ಮತ್ತು ನೈತಿಕ ಸಾಮರ್ಥ್ಯದ ಪ್ರತ್ಯಕ್ಷ ಸ್ವರೂಪವು ಸಹಕಾರವು ಪಂಚಮಹಾತತ್ವಗಳ ಯೋಗ್ಯ ಮಿಶ್ರಣಗಳ ಮೇಲಿಂದ ಯಾವ ಪ್ರಕಾರ ಯಾವತ್ತೂ ಪದಾರ್ಥಗಳು ಪ್ರಕಟಿತ ವಾಗಿರುತ್ತವೆಯೋ, ಅದೇ ರೀತಿಯಲ್ಲಿ ಯಾವತ್ತೂ ಸದ್ಗುಣಗಳ ಸಮ್ಮಿಶ್ರಣವನ್ನು ಸಹಕಾರೀ ಚಳವಳಿಯಲ್ಲಿ ಕಾಣಬಹುದು. ಆದ್ದ

ರಿಂದ ಇಂತಹ ಚಳವಳಿಯಲ್ಲಿ ಪ್ರತಿಯೊಬ್ಬನು ಉತ್ಸಾಹದಿಂದ ಭಾಗ ತೆಗೆದುಕೊಂಡು ತನ್ನ ಐಹಿಕ ಮತ್ತು ಪಾರಮಾರ್ಥಿಕ ಉನ್ನತಿ ಯನ್ನು ಮಾಡಿಕೊಳ್ಳತಕ್ಕದ್ದು.

## ೭. ಪರಿಷತ್ತುಗಳ ಮಹತ್ವವು

## Conferences; their importance & use

ಸಭೆಗಳಲ್ಲಿ ಸಂಚರಿಸುವದರಿಂದ ಮಾನವನ ಚತುರತೆಯು ಹೆಚ್ಚಾಗುವದೆಂದು ಧಾರಾಳವಾಗಿ ಹೇಳಬಹುದು. ಅಲ್ಲಿ ಎಷ್ಟೋ ಪ್ರಕಾರದ ವಿದ್ವಾನ್ ಮತ್ತು ಅನುಭವಿಕ ಗೃಹಸ್ಥರು ಬರುತ್ತಲಿರುವ ಮೂಲಕ ಅವರ ಕೂಡ ಸಂಭಾಷಣವನ್ನು ಮಾಡುವ ಪ್ರಸಂಗವು ಬರುತ್ತದೆ. ನಾವು ತಪ್ಪುತ್ತಲಿರುವ ಹಲಕೆಲವು ಸಂಗತಿಗಳನ್ನು ಹೇಗೆ ತಿದ್ದಿಕೊಳ್ಳಬೇಕೆಂಬುದನ್ನು ಮತ್ತು ಎರಡನೇಯವರು ತಪ್ಪದಂತೆ ಅವರನ್ನು ಹೇಗೆ ಜಾಗ್ರತರನ್ನಾಗಿ ಮಾಡಬೇಕೆಂಬುದನ್ನೂ ಸಭೆಗಳಿಗೆ ಹೋಗುವದರಿಂದ ತಿಳಿಯುತ್ತದಲ್ಲದೆ ಎರಡನೇಯವರ ಅಡಚಣಿಗ ಳನ್ನು ದೂರೀಕರಿಸಲಿಕ್ಕೆ ಯಾವ ಯಾವ ಉಪಾಯಗಳನ್ನು ಯೋಜಿ ಸಬೇಕೆಂಬುವ ಯುಕ್ತಿಯು ಸಹ ಹೊಳೆಯುತ್ತದೆ.

ಪ್ರತಿಯೊಬ್ಬನಿಗೆ ಎಲ್ಲ ಜನರ, ಮತ್ತು ಎಲ್ಲ ಜನರಿಗೆ ಪ್ರತಿ ಯೊಬ್ಬರ ಪರಿಚಯುವಿರುವದು ಅವಶ್ಯವು. ಸಮಾಜದಲ್ಲಿ ಕೆಲವರು ಪ್ರತ್ಯಕ್ಷವಾಗಿಯೂ ಬೇರೆ ಕೆಲವರು ತಮ್ಮ ತಮ್ಮ ಹೆಸರುಗಳ ಮೂಲಕ ವಾಗಿಯೂ ಗುರ್ತಿಸಲ್ಪಡುತ್ತಾರೆ. ಪರಿಷತ್ತಿನಲ್ಲಿ ಈ ಪ್ರಕಾರದ ಯಾವತ್ತೂ ವ್ಯಕ್ತಿಗಳ ಪರಿಚಯವಾಗಿ ಸ್ನೇಹಸಂಬಂಧವಾದರೂ ವೃದ್ಧಿಂಗತವಾಗುತ್ತದೆ.

ಜ್ಞಾನದ ಅನುಭವ, ವ್ಯವಹಾರ, ಚತುರತನ, ಪರಸ್ಪರ ಪರಿ ಚಯ ಮುಂತಾದವುಗಳ ದೃಷ್ಟಿಯಿಂದ ಸಭೆಗಳ ಮಹತ್ವವು ವಿಶೇಷ ವಾಗಿರುತ್ತದೆ. ಇದಲ್ಲದೆ ತಾವಿರತಕ್ಕ ಸ್ಥಳವನ್ನು ಬಿಟ್ಟು ಪರಸ್ಥಳಕ್ಕೆ

ಪೋಗಬೇಕಾಗುವದರಿಂದ ಅಲ್ಲಲ್ಲಿಯ ಜನರ ಸ್ಥಿತಿ, ಸಮಾಜ ವ್ಯವಸ್ಥೆ, ಸ್ವಭಾವ ನಡೆನುಡಿ ಮೊದಲಾದವುಗಳ ಜ್ಞಾನವಾಗುತ್ತದೆ. ಪ್ರತ್ಯಕ್ಷ ಸ್ಥಿತಿಯನ್ನು ನೋಡಲವಕಾಶ ದೊರೆಯುವ ಮೂಲಕ ನಮ್ಮ ತಿಳುವಳಿಕೆಯಲ್ಲಿ ಏನಾದರೂ ಕುಂದುಕೊರತೆಗಳಿದ್ದರೆ ಅವುಗಳನ್ನು ಸುಧಾರಿಸಲನುಕೂಲವಾಗುವದು. ಆಯಾ ಸ್ಥಳಗಳಲ್ಲಿರುವ ಸೃಷ್ಟಿ ಸೌಂದರ್ಯವನ್ನಾದರೂ ನೋಡಲಿಕ್ಕೆ ದೊರೆಯುವದು.

ಮೇಲೆ ವಿವರಿಸಿದ ಲಾಭಗಳೆಲ್ಲ ವ್ಯಕ್ತಿಪ್ರಮಾಣದಿಂದ ಆಗುತ್ತವೆ; ಆದರೆ ಸಮಾಜದ ದೃಷ್ಟಿಯಿಂದ ಪರಿಷತ್ತಿಗೆ ಅತಿ ಮಹತ್ವವಿರುತ್ತದೆಂಬ ಸಂಗತಿಯನ್ನು ಓದುಗರೆಲ್ಲರೂ ಚನ್ನಾಗಿ ಲಕ್ಷದಲ್ಲಿಡತಕ್ಕ ಮಾತಾಗಿದೆ. ಲೋಕಮತ ಮತ್ತು ವ್ಯಕ್ತಿಮತಗಳಲ್ಲಿರುವ ಅಂತರವನ್ನು ಕಂಡುಹಿಡಿಯುವದರಲ್ಲಿ ಪರಿಷದವು ಒಂದು ಒಳ್ಳೇ ಸಾಧನವಾಗಿರುವದು.

ಸದ್ಯದಲ್ಲಿ ಸಹಕಾರೀ ಸಂಸ್ಥೆಗಳ ಬಗ್ಗೆ ಅನೇಕ ಮಹತ್ವದ ಪ್ರಶ್ನೆಗಳು ಉದ್ಭವಿಸುತ್ತಲಿರುವವು. ಅವುಗಳ ನಿರ್ಣಯಾತ್ಮಕ ಧೋರಣವು ಯಾವದಿರಬೇಕೆಂಬುದನ್ನು ವಿಚಾರಮಾಡಿ ಠರಾಯಿಸತಕ್ಕ ಮಾತಾಗಿದೆ. ಹಲಕೆಲವು ಗೊತ್ತುವಳಿಗಳು (ಠರಾವುಗಳು) ಬಹುಮತದಿಂದ ಪಾಸಾಗುತ್ತಿರುವದರಿಂದ ಆದಷ್ಟು ಹೆಚ್ಚಾಗಿ ಜನರು ಸಭೆಗಳಲ್ಲಿ ಭಾಗ ತೆಗೆದುಕೊಂಡರೆ ಅವಕ್ಕೆ ಮಹತ್ವವು ಪ್ರಾಪ್ತವಾಗುತ್ತದೆ.

ಇತ್ತಿತ್ತಲಾಗಿ ನಮ್ಮೀ ಕರ್ನಾಟಕದಲ್ಲಿ ಸಹಕಾರೀ ಸಂಘಗಳ ಪರಿಷದಗಳು (Conferences) ಮೇಲಿಂದ ಮೇಲೆ ಜರುಗುತ್ತಲಿರುವವು. ಅವುಗಳ ಉದ್ದೇಶವು ಮುಖ್ಯವಾಗಿ ಸಂಘಗಳ ಅಡಚಣೆಗಳನ್ನು ಶಕ್ಯವಿದ್ದಮಟ್ಟಿಗೆ ದೂರೀಕರಿಸುವದಿದ್ದಾಗ್ಯೂ ನಮ್ಮ ಸಹಕಾರಿ ಪ್ರತಿನಿಧಿಗಳು ಇನ್ನೂವರೆಗೆ ಸಾಕಷ್ಟು ಮನಸ್ಸು ಹಾಕದಿರುವದನ್ನು

ನೋಡಿದರೆ ವಿಷಾದವಾಗುತ್ತದೆ. ಹಲವರು ತಮ್ಮ ತಮ್ಮ ಅಡಚಣೆ ಗಳ ವಿಚಾರವನ್ನೇ ಮಾಡುವದಿಲ್ಲ. ಕೆಲವರು ಉದಾಸೀನ ವೃತ್ತಿ ಯುಳ್ಳವರಿರುವರು. ಆದರೆ ಹೀಗೆ ಮಾಡದೆ ಸಂಘಗಳಿಂದ ಆರಿಸಿ ಕಳುಹಿಸಲ್ಪಟ್ಟ ಪ್ರತಿನಿಧಿಗಳು ಸಭೆಗಳಿಗೆ ಹೋಗಿ ತಮ್ಮ ತಮ್ಮ ಅಡ ಚಣಿಗಳ ನಿವಾರಣೆಯ ಬಗ್ಗೆ ಪ್ರಯತ್ನವಾಡಬೇಕಲ್ಲದೆ ಸಹಕಾರೀ ಚಳವಳಿಯಲ್ಲಿ ಮೇಲಿಂದ ಮೇಲೆ ಆಗುತ್ತಲಿರುವ ಸುಧಾರಣೆಯ ಕಡೆಗೆ ಲಕ್ಷ್ಯಕೊಡುವಂತಿದೆ.

ನಮ್ಮ ರೈತ ಬಂಧುಗಳ ಧೋರಣವು ಇಂಥ ಪರಿಷತ್ತುಗಳ ಕಡೆಗೆ ವಿಶೇಷವಾಗಿ ಹೋಗಿ ಅವುಗಳ ಉಪಯೋಗವನ್ನು ಮಾಡಿ ಕೊಳ್ಳಬೇಕೆಂಬ ಹೇತುವೇ ಪ್ರಸ್ತುತ ಲೇಖದ ಧ್ಯೇಯವು.

ಕಟ್ಟ ಕಡೆಗೆ ನಮ್ಮ ಸಹಕಾರೀ ಬಂಧುಗಳಿಗೆ ಆಗ್ರಹಪೂರ್ವ ಕವಾಗಿ ವಿನಂತಿ ಮಾಡಿಕೊಳ್ಳುವದೇನಂದರೆ, ಇನ್ನು ಮುಂದೆ ಜರುಗ ತಕ್ಕ ಪರಿಷದುಗಳಲ್ಲಿ ಅವರು ಅವಶ್ಯವಾಗಿ ಭಾಗತೆಗೆದುಕೊಳ್ಳಬೇಕು. ಉದಾಶೀನ ವೃತ್ತಿಯವರಾಗಬಾರದು; ಖರ್ಚಾಗುವ ಸ್ವಲ್ಪ ಹಣದ ಕಡೆಗೆ ನೋಡಬಾರದು. ಅನುದಾರತ್ವವನ್ನು ತೋರಿಸಬಾರದು. ಆಕುಂಚಿತಭಾವವನ್ನು ಹಿಡಿಯಬಾರದು. ಶಕ್ಯವಿದ್ದಮಟ್ಟಿಗೆ ಪರಿಷ ತ್ತುಗಳ ಉಪಯೋಗವನ್ನು ಮಾಡಿಕೊಂಡು ಎರಡನೇಯವರಿಗೆ ತಮ್ಮ ಉದಾಹರಣೆಯನ್ನು ಹಾಕಿಕೊಡುವ ಉಪಕ್ರಮವನ್ನು ಮಾಡಬೇಕು.

## ೮. ಹಿಂದೂ ದೇಶದ ಒಕ್ಕಲಿಗರ ಸಾಲವು

## The Indian Agriculturists' Indebtedness.

ಕ್ರಿಸ್ತೀ ಜನರ **ಬಾಯಬಲ್ಲಿ**ನಲ್ಲಿಯೂ, ಮಹಮ್ಮದೀಯರ **ಕುರಾನ**ದಲ್ಲಿಯೂ ಮತ್ತು ಹಿಂದುಗಳ **ಮನುಧರ್ಮ ಶಾತ್ರದ ಲ್ಲಿಯೂ** ಸಾಲ ಮತ್ತು ಬಡ್ಡಿಗಳ ಉಲ್ಲೇಖವಿರುವದರಿಂದ ಈ ವಿಷ

ಯವು ಅತಿ ಪುರಾತನ ಕಾಲದಿಂದಲೂ ಈ ಜಗತ್ತಿನಲ್ಲಿ ಮನೆಮಾಡಿ ಕೊಂಡಿರುವದೆಂದು ಧಾರಾಳವಾಗಿ ಹೇಳಬಹುದು. ಅಂದಿನಿಂದ ಇಂದಿನವರೆಗೆ ಆಗಿ ಹೋದ ಪೂರ್ವ ಪಶ್ಚಿಮ ಖಂಡಗಳ ರಾಜ್ಯ ಕರ್ತೃಗಳಿಗೂ ಮತ್ತು ಈಗಿನ ಆರ್ಥಿಕ ಶಾಸ್ತ್ರಜ್ಞರಿಗೂ, ಹಾಗೂ ಸರಕಾರಗಳಿಗೂ ಈ ಸಮಸ್ಯವು ತೊಡಕು ತೊಡಕಾಗಿಯೇ ನಿಂತುಬಿಟ್ಟಿರುವದು. ಸಾಲಕೊಡುವ ಸಾಹುಕಾರರೂ, ಸಾಲ ತೆಗೆದುಕೊಳ್ಳುವ ಬಡಜನರೂ ಆಗಲೂ ಇದ್ದರು; ಈಗಲೂ ಇರುವರು. ಆದರೆ ಇನ್ನು ಮುಂದೆ ಅವರವರ ಪ್ರಮಾಣವನ್ನು ಕಡಿಮೆಮಾಡಬೇಕೆಂದು ಪ್ರಯತ್ನಗಳು ನಡಿಯಲಾಗಿವೆ.

ಭಾರತದ ಸೌಭಾಗ್ಯವು ಒಕ್ಕಲಿಗರ ಆರ್ಥಿಕ ಪರಿಸ್ಥಿತಿಯನ್ನವಲಂಬಿಸಿರುತ್ತದೆಂದು ಎಲ್ಲರೂ ಒಪ್ಪಿರುವರು. ಇನ್ನು ಈ ಪರಿಸ್ಥಿತಿಯ ಬಗ್ಗೆ ತುಸು ವಿಚಾರಮಾಡುವಾ. ಸಾಲದಲ್ಲಿಯೇ ಹುಟ್ಟಿ, ಸಾಲದಲ್ಲಿಯೇ ಬೆಳೆದು, ಸಾಲವನ್ನೇ ಹೆಚ್ಚಿಸಿ, ಕಡೆಗೆ ಅದರಲ್ಲಿಯೇ ಸಾಯುವವನು ಯಾರೆಂದು ಕೇಳಿದರೆ, ಅವನು ನಮ್ಮ ಒಕ್ಕಲಿಗನೇ ಎಂದು ಉತ್ತರವು ದೊರೆಯುವದು.

ಹಿಂದುಸ್ಥಾನದ ಒಕ್ಕಲಿಗರ ಒಟ್ಟು ಸಾಲವು ಸರಾಸರಿ ಒಂದು ಸಾವಿರಕೋಟಿ ರೂಪಾಯಿಗಳಿಗಿಂತ ಕಡಿಮೆ ಇರುವದಿಲ್ಲೆಂದು ಬಲ್ಲವರು ಹೇಳುವರು. ಇದರಲ್ಲಿ ಎಂಬತ್ತೊಂದು ಕೋಟಿ ರೂಪಾಯಿ ಬರೇ ಮುಂಬಯಿ ಇಲಾಖೆಯದೇ ಇರುವದು. ಈ ಸಾಲವು ಸಾಧಾರಣವಾಗಿ ೩೦೦ ವರ್ಷಗಳಿಂದೀಚಿಗೆ ಆಗಿದ್ದು, ಅದು ಕಳೆದ ಕೆಲವು ವರ್ಷಗಳಿಂದೀಚೆಗೆ ಹೆಚ್ಚಿಗೆ ಉಬ್ಬಿ ಕೊಬ್ಬಿಬಿಟ್ಟಿರುವದು. ಹೀಗೆ ಸಾಲವು ಹೆಚ್ಚುವದಕ್ಕೆ ಕೆಳಗೆ ಬರೆದ ಕಾರಣಗಳು ಮುಖ್ಯವಾದವುಗಳು:—

(೧) ದೇಶದ ಜನಸಂಖ್ಯೆಯು ಬೆಳೆದಂತೆ, ಆಹಾರವನ್ನು ಹೆಚ್ಚಿಸುವ ಸಾಧನ ಸಾಮುಗ್ರಿಗಳು ಬೆಳೆಯದಿರುವಿಕೆ.

(೨) ಹೊಲಗಳ ಸಣ್ಣ ಸಣ್ಣ ವಿಭಾಗಗಳಾಗಿ ಬೇಸಾಯಕ್ಕೆ ತೊಂದರೆಯಾಗುತ್ತಿದೆ.

(೩) ಒಕ್ಕಲಿಗರ ದುರ್ಘಟವಾದ ಅಜ್ಞಾನವು.

(೪) ಉಪದಂಧೆಗಳ ಅಭಾವ.

(೫) ಸಕಾಲಕ್ಕೆ ಸರಿಯಾಗಿ ಮಳೆಯು ಬಾರದಿರುವದು.

(೬) ಒಕ್ಕಲಿಗರ ಅನಾರೋಗ್ಯವು.

(೭) ಯೋಗ್ಯ ಶಿಕ್ಷಣದ ಅಭಾವ.

(೮) ರೋಗ ಮತ್ತು ಬರಗಾಲಗಳ ಮೂಲಕ ದನಕರುಗಳ ನಾಶ.

(೯) ವ್ಯಾಜ್ಯದ ಸಲುವಾಗಿ ಮೇಲಿಂದ ಮೇಲೆ ಕೋರ್ಟು-ಕಚೇರಿಗಳಿಗೆ ಎಡತಾಕುವದರಿಂದಾಗುವ ದ್ರವ್ಯಹಾನಿಯು.

(೧೦) ಪ್ರಪಂಚದ ಸಂಸ್ಕಾರಗಳಿಗೆ ಪ್ರಮಾಣ ಮೀರಿ ವೆಚ್ಚ ಮಾಡುವದು.

(೧೧) ಹಳೇ ಸಾಲ ಎಂದರೆ ತಮ್ಮ ಅಜ್ಜ ಮುತ್ತಜ್ಜರ ಕಾಲದಿಂದ ಬಂದ ಸಾಲದ ಹೆಚ್ಚುವಿಕೆ.

(೧೨) ಸಾಹುಕಾರರ ಒತ್ತಾಯದ ಮೂಲಕ ಹೆಚ್ಚೆಚ್ಚಿಗೆ ಬಡ್ಡಿಯದರದಿಂದ ಹೆಚ್ಚಿಗೆ ಸಾಲವನ್ನು ತರುವದು.

(೧೩) ಹೊಸ ಪರಿಸ್ಥಿತಿಯಿಂದುಂಟಾದ ಅನೇಕ ತರದ ಅನವಶ್ಯಕ ಬೇಡಿಕೆಗಳನ್ನು ಪೂರೈಸಿಕೊಳ್ಳಲು ದ್ರವ್ಯವು ವೆಚ್ಚವಾಗುವಿಕೆ.

(೧೪) ಚಕ್ರಬಡ್ಡಿ, ಏರಿಕೆಯ ಬಡ್ಡಿಯನ್ನು ಕೊಡುವದು.

(೧೫) ಪತ್ತು ಇರುವವೆಂಬ ಒಣ ಹೆಮ್ಮೆಯಿಂದ ಆಗಾಗ್ಗೆ ಸಾಲವನ್ನು ತರುವದು.

(೧೬) ಭೂಮಿಯ ಕಂದಾಯವನ್ನು ಹಣದ ರೂಪದಲ್ಲಿ ಕೊಡುವದರಿಂದ ಒಕ್ಕಲಿಗರಿಗಾಗುವ ತೊಂದರೆ.

(೧೭) ಪೂರ್ವಕಾಲದಿಂದ ಒಂದೇ ಭೂಮಿಯಲ್ಲಿ ಹೊರಳಿ ಮರಳಿ ಒಂದೇ ರೀತಿಯಲ್ಲಿಯೇ ಸಾಗುವಳಿಯನ್ನು ಮಾಡುತ್ತ ಬಂದಿರುವದರಿಂದ ಸದರೀ ಭೂಮಿಗಳು ಶಾಸ್ತ್ರೀಯ ದೃಷ್ಟಿಯಿಂದ ನಿರ್ವಿಣ್ಯವಾಗಿರುವದರಿಂದ ಸಂಪೂರ್ಣ ಬೆಳೆಯನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲದಂತಾಗಿ ಒಕ್ಕಲಿಗರ ಆದಾಯವು ಕಡಿಮೆಯಾಗಹತ್ತಿದೆ.

(೧೮) ಒಕ್ಕಲಿಗನು ತನ್ನ ಸಂಸಾರವನ್ನು ಸುಸೂತ್ರವಾಗಿ ಸಾಗಿಸಿಕೊಂಡು ಹೋಗಲಿಕ್ಕಾಗುವ ಉತ್ಪನ್ನ ಮತ್ತು ಖರ್ಚುಗಳ ಅಂದಾಜು ಪ್ರಮಾಣವು ಹೊಳೆಯದೇ ಹೋಗಿ, ಕೈಮೀರಿ ಖರ್ಚಾದ ಕೂಡಲೆ ಸಾಹುಕಾರರ ಕಡೆಗೆ ಧಾವಿಸುವನು.

(೧೯) ಹಲವು ಕೆಲವು ಪ್ರಾಂತಗಳಲ್ಲಿ ಸಾಲವನ್ನು ತೆಗೆದುಕೊಂಡ ರೈತರು, ಸಾವುಕಾರರು ಕರೆದಾಗ, ತಮ್ಮ ಎಂತಹ ಲಾಭದಾಯಕ ಕೆಲಸವಿದ್ದರೂ ಕೂಡ ಅದನ್ನು ಬಿಟ್ಟು, ಅವರು ಹೇಳಿದ ಕೆಲಸವನ್ನು ಹೇಳಿದಷ್ಟು ದಿವಸಗಳವರೆಗೆ ತೀರ ಕಡಿಮೇ ಪಗಾರಕ್ಕೆ (ಒಂದು ಹೊತ್ತಿನ ಊಟಕ್ಕೆ ಸಾಕಾಗುವಷ್ಟು) ದುಡಿಯಲಿಕ್ಕೆ ಹೋಗುವರು. ಇದರಿಂದಲಂತೂ ಮೊದಲಿನ ಸಾಲವು ಹಾಗೇ ಉಳಿಯುತ್ತ ಹೋಗಿ ಬಡವರು ಉದ್ಧಾರವಾಗುವ ಮಾರ್ಗವೇ ಇರುವದಿಲ್ಲ.

(೨೦) ಅನುತ್ಪಾದ ಕೆಲಸಗಳಿಗೆ ಸಾಲವನ್ನು ತರುವದು.

ಇವೇ ಮೊದಲಾದ ಅನೇಕ ಕಾರಣಗಳಿಂದ ಸಾಲವು ಬೆಳೆಯುತ್ತಹೋಗಿ ರೈತರು ತಮ್ಮ ಹೊಲಗಳನ್ನು ಮಾರಹತ್ತಿರುವರು. ಇವುಗಳಲ್ಲಿ ಹಳೆಯ ಸಾಲವು ಮಹತ್ವದ್ದಿದೆ. ಇದರಿಂದ ರೈತನಿಗೆ

ಹೆಚ್ಚಿಗೆ ಬಡ್ಡಿಯಿಂದ ಸಾಲವನ್ನು ತರುವ ಪ್ರಸಂಗವು ಒದಗುತ್ತದೆ. "ಹುಲಿ ಬಡ್ಡಿ" ಯ ರೂಢಿಯು ಇದರಿಂದಲೇ ನಿರ್ಮಿತವಾಗಿದೆ.

ಇನ್ನು ಈ ಅನಿಷ್ಟ ಸ್ಥಿತಿಯ ಕಾರಣಗಳು ಗೊತ್ತಾದ ಬಳಿಕ ಇವುಗಳನ್ನು ದೂರಮಾಡದೆ ಹೋದರೆ, ಒಕ್ಕಲಿಗನು ಇದಕ್ಕೂ ಹೆಚ್ಚಿನ ಬಿಕ್ಕಟ್ಟಾದ ಪರಿಸ್ಥಿತಿಗೀಡಾಗುವದು ಸಹಜವು

ಈ ಬಗ್ಗೆ ಯೋಜಿಸತಕ್ಕ ಉಪಾಯಗಳಲ್ಲಿ ಕೆಲವು ಒಕ್ಕಲಿಗನೇ ಮಾಡತಕ್ಕವುಗಳಿರುವವು; ಇನ್ನು ಕೆಲವು ಸರಕಾರದಿಂದೊದಗತಕ್ಕ ಸಹಾಯವನ್ನವಲಂಬಿಸಿರುತ್ತವೆ. ಒಕ್ಕಲಿಗನು ಜಾಣನಾಗಿ, ಲಗ್ನ ಮುಂತಾದ ಕಾರ್ಯಗಳಲ್ಲಿ ಬಹು ಹುರುಪುಗೊಂಡು (ಸಾಲಮಾಡಿ) ಅಳತೆ ಮೀರಿ ವೆಚ್ಚಮಾಡುವದನ್ನು ನಿಲ್ಲಿಸತಕ್ಕದ್ದು. ಬೆಳೆಗಳು ಚನ್ನಾಗಿ ಬಂದು ಕೈಯ್ಯಲ್ಲಿ ಹಣವಿರುವಾಗ್ಗೆ ಅದನ್ನು ಕಾಯ್ದುಕೊಂಡು ಅದರ ಸಹಾಯದಿಂದ ಮತ್ತೆ ಹೆಚ್ಚಿಗೆ ಹಣವನ್ನು ಗಳಿಸುವ ಯೋಜನೆಯನ್ನು ಮಾಡದೆ ಸಿಕ್ಕ ಸಿಕ್ಕಂತೆ ಖರ್ಚುಮಾಡಿ ಮುಂದೆ ಬೆಳೆ ಬರದೆ ಹೋದಕಾಲಕ್ಕೆ ತಿನ್ನಲಿಕ್ಕೆ ಸಹ ಕೂಳಿಲ್ಲದೆ ಪೇಚಾಡಬೇಕಾಗುವ ಪ್ರಸಂಗವನ್ನು ಮುಂಚಿತವಾಗಿಯೇ ಅರಿತು, ಈ ಬಗ್ಗೆ ಮುಂಜಾಗ್ರತೆಯನ್ನು ತಾಳಿ ಮಿತವ್ಯಯವನ್ನು ಅನುಸರಿಸತಕ್ಕದ್ದು. ಏರು ಲಾವಣಿಗಳಿಂದ ಹೊಲಗಳನ್ನು ಹಿಡಿದು ಲಾಭವಿಲ್ಲದೆ ಗೋಳಾಡುವದನ್ನು ಒಕ್ಕಲಿಗರೇ ಒಕ್ಕಟ್ಟಾಗಿ ನಿಲ್ಲಿಸಬೇಕು. ಬೇರೆ ಬೇರೆ ಕಡೆಯಲ್ಲಿ ಸಾಲಮಾಡುತ್ತ ಹೋಗಬಾರದು. ಅಂದರೆ ಒಬ್ಬನೇ ಮನುಷ್ಯನು ಒಂದಕ್ಕಿಂತ ಹೆಚ್ಚಿಗೆ ಸ್ಥಳದಲ್ಲಿ ಸಾಲತೆಗೆದುಕೊಳ್ಳದಂತೆ ಜಾಗರೂಕನಾಗಿರಬೇಕು. ಇದರಂತೆ, ತನ್ನ ವೇಳೆಯ ಅಪವ್ಯಯ ಆಗದಹಾಗೆ ಹೊಲದಲ್ಲಿ ಕೆಲಸವಿಲ್ಲದಾಗ್ಗೆ, ಏನಾದರೊಂದು ದುಯ್ಯಂ ದಂಧೆ (ಉಪದಂಧೆ) ಯನ್ನು ಒಕ್ಕಲಿಗನು ಮಾಡಲಿಕ್ಕೆ ಕಲಿಯಬೇಕು.

ಇದರಂತೆ, ಈ ವಿಷಯದಲ್ಲಿ ಸರಕಾರದ ಒಳ್ಳೇ ಸಹಾನುಭೂತಿಯು ಅತ್ಯವಶ್ಯವಿದೆ. ಆ ಮೇರೆಗೆ ಅವರ ಪ್ರಯತ್ನಗಳೂ ನಡೆದಿವೆ. ಕಾಲಕಾಲಕ್ಕೆ ವಿಚಾರಣಾ ಕಮಿಟಿಗಳನ್ನು ನಿಯಮಿಸಿ, ತಜ್ಞರ ಅಭಿಪ್ರಾಯಗಳನ್ನು ಪಡೆದು, ಆ ಮೇರೆಗೆ ಹೊಸ ಕಾಯದೆ ಕಾನೂನುಗಳನ್ನು ಸರಕಾರವು ಆಗಿಂದ್ದಾಗ್ಗೆ ಅಮಲಿನಲ್ಲಿ ತಂದಿರುವದು.

(೧) **ತಗಾಯಿ ಸಾಲವು**— ಒಕ್ಕಲಿಗರಿಗೆ " ತಗಾಯಿ " ಸಾಲವನ್ನು ಕೊಟ್ಟು ಅನುಕೂಲತೆ ಮಾಡಿಕೊಡುವದು ಬಹಳ ದಿವಸಗಳಿಂದ ನಡೆದು ಬಂದಿದೆ. ಸನ್ ೧೮೭೧, ೧೮೭೬ ಮತ್ತು ೧೮೭೯ ರಲ್ಲಿ ಈ ಬಗ್ಗೆ ಬೇರೆ ಬೇರೆ ಕಾಯದೆಗಳಾದವು. ಆದರೆ, ಮುಂದೆ ಸನ್ ೧೮೮೩ರಲ್ಲಿ "ಜಮೀನ ಸುಧಾರಣೆಯ ಕುರಿತು ಸಾಲದ ಕಾಯದೆ" (Land Improvements Loans Act) ಮತ್ತು ಸನ್ ೧೮೮೪ ರಲ್ಲಿ 'ಒಕ್ಕಲಿಗರ (ಕಿರುಕೋಳ) ಸಾಲದ ಕಾಯದೆ' (Agriculturists' Loans Act) ಗಳಾದಂದಿನಿಂದ, ತಗಾಯಿ ಸಾಲಗಳ ಉಪಯುಕ್ತತೆಯು ಒಕ್ಕಲಿಗರಿಗೆ ಒಳಿತಾಗಿ ದೊರೆಯಹತ್ತಿತು. ಮೊದಲನೆಯ ಕಾಯಿದೆಯಿಂದ ಭೂಮಿಯಲ್ಲಿ ಮಾಡಬೇಕಾದ ಒಡ್ಡು, ಭಾವಿ ಮೊದಲಾದ ಶಾಶ್ವತವಾದ ಸುಧಾರಣೆಗಳ ಸಲುವಾಗಿಯೂ, ಎರಡನೆಯ ಕಾಯಿದೆಯಿಂದ "ಚಾಲತೀ" ಖರ್ಚಿನ ಅಡಚಣಿಗಾಗಿಯೂ (ಎಂದರೆ ಬೀಜ, ಗೊಬ್ಬರ, ಗಳೇದ ಸಾಮಾನು ಮುಂತಾದವುಗಳನ್ನು ಕೊಳ್ಳುವದರ ಸಲುವಾಗಿ) ಸಾಲವು ಸಿಗಹತ್ತಿತು.

(೨) ಕೆಲವೊಂದು ನಿರ್ದಿಷ್ಟ ಕೆಲಸಗಳಿಗೆ ಮಾತ್ರ ಈ ತಗಾಯಿ ಸಾಲಗಳು ದೊರೆಯಬಹುದಾದ್ದರಿಂದ, ಒಕ್ಕಲಿಗನು ತನ್ನ ಬೇರೆ ಕಾರ್ಯಗಳ ಸಲುವಾಗಿ ಸಾಹುಕಾರನನ್ನೇ ಕಾಣಬೇಕಾಗಿ ಆ ರೀತಿಯಾಗಿ ಅವನ ಬೇರೆ ಸಾಲವು ಹೆಚ್ಚುತ್ತಲೇ ನಡೆಯಿತು. ಇದನ್ನು ಕಂಡುಹಿಡಿದು, ಸನ್ ೧೮೭೯ರಲ್ಲಿ " ಶೇತಕೀ ರಿಲೀಫ ಆಕ್ಟ "

( Deccan Agrrculturists Relief Act of 1879 ) ಎಂಬ ಹೊಸಕಾಯಿದೆಯು ಪಾಸಾಯಿತು. ಇದರಿಂದ ಸಾವುಕಾರರು ಒಕ್ಕಲಿಗನಿಂದ ತಮಗೆ ಸಲ್ಲತಕ್ಕ ಸಾಲವನ್ನು ಸರಿಯಾದ ಹಣದ ಮೇಲೆ ಯೋಗ್ಯ ಬಡ್ಡಿಯದರದಿಂದ ತೀರಿಸಿಕೊಳ್ಳಬೇಕೆಂದು ಕಟ್ಟಳೆಯಾಯಿತು. ಮತ್ತು ಒಕ್ಕಲಿಗರ ಭೂಮಿಗಳು ಮಾರಿಹೋಗುವದಕ್ಕೆ ತಡೆಹಾಕಿದ್ದಲ್ಲದೆ, "ದಾವೆ" ಮಾಡಲಿಕ್ಕೆ ಬೇಕಾಗುವ ಅವಧಿಯನ್ನು ಹೆಚ್ಚಿಸಿತು.

ಈ ಕಾನೂನಿನಿಂದ ಕೆಲವು ದಿವಸಗಳವರೆಗೆ ಒಕ್ಕಲಿಗರ ಹಿತವಾದಾಗ್ಯೂ ಮುಂದೆ ಅವನ ದುಡ್ಡಿನ ಕೊರತೆಯು ತಪ್ಪದೇ ಹೋದ್ದರಿಂದ, "ಮುಪ್ಪಟಿ ಬರಿಸಿ ಕೊಡುವದು", "ಶರ್ತ ಖರೀದಿ" ಮೊದಲಾದ ದುಷ್ಪರಿಣಾಮಗಳು ಹೊರಬಿದ್ದು, ಒಕ್ಕಲಿಗನಿಗೆ ತೊಂದರೆಯು ಹೆಚ್ಚಾಯಿತು; ಅವನ ಪತ್ತು ಕಡಿಮೆಯಾಗಿ ಹೋಯಿತು.

(೩) ಸನ್ ೧೮೭೫ರಲ್ಲಿ " ಕಂಟ್ರಾಕ್ಟ ಆಕ್ಟ " ನಿಂದಲೂ (Contract) ಮತ್ತು ಸನ್ ೧೯೧೮ "ಹುಲಿಬಡ್ಡಿ"ಯ ಕಾಯದೆಯಿಂದಲೂ (Usarious Loans Act) ಒಕ್ಕಲಿಗನಿಗೆ ಮತ್ತೆ ಕೆಲವು ಅನುಕೂಲತೆಗಳು ಒದಗಿಸಿ ಕೊಡಲ್ಪಟ್ಟವು.

(೪) ಕಡೆಯಲ್ಲಿ ನಿಕೋಲಸನ್ನರು ( Madras Government ) ಸಹಕಾರೀ ಯೋಜನೆಯಿಂದ ಒಕ್ಕಲಿಗರ ಸಾಲವು ಹಿಂಗಬಹುದೆಂದು ತಿಳಿದು, ಅದರಂತೆ ಸರಕಾರಕ್ಕೆ ತನ್ನ ವರದಿಯನ್ನು ಸಾದರಪಡಿಸಿದನು. ಇದರಿಂದ ಸಹಕಾರೀ ಸಂಘಗಳ ಕಾಯಿದೆಯುಂಟಾಗಿ ಹಿಂದುಸ್ಥಾನದಲ್ಲೆಲ್ಲ ಈ ತರದ ಸಂಸ್ಥೆಗಳು ಸ್ಥಾಪಿಸಲ್ಪಟ್ಟವು. ಸದ್ಯದ ಕೊರತೆಗಾಗಿಯೂ, ಹಳೆಯ ಸಾಲವನ್ನು ತೀರಿಸುವದಕ್ಕಾಗಿಯೂ ದೊರೆಯಹತ್ತಿತು.

## ಮುಂಬಯಿ ಒಕ್ಕಲಿಗ ಸಾಲಗಾರರ ಋಣ ಪರಿಹಾರ ಕಾಯಿದೆಯು

ಸನ್ ೧೯೪೭ನೇ ಇಸವಿಯ ಮುಂಬಯಿ ಪ್ರಾಂತದ ಒಕ್ಕಲಿಗರ ಸಾಲಪರಿಹಾರ (Bombay Agriculturists Debt Relief Act) ಕಾಯಿದೆಯ ಉದ್ದೇಶವು ಒಕ್ಕಲಿಗರನ್ನು ಸಂಪೂರ್ಣವಾಗಿ ಅವರ ಸಾಲದ ಹೊರೆಯಿಂದ ಮುಕ್ತಮಾಡುವದೂ ಮತ್ತು ಸಾಲಗಳನ್ನು ಒತ್ತಾಯದಿಂದ ಸರಿಪಡಿಸುವದೂ ಆಗಿದ್ದು ಇತ್ತೀತ್ತಲಾಗಿ ಈ ಕಾಯಿದೆಯು ಕೆಲವು ಕಲಮುಗಳನ್ವಯ ಸಾಲಗಳನ್ನು ಪ್ರಮಾಣದಂತೆ ಕಡಿಮೆ ಮಾಡಿ ಅವುಗಳನ್ನು ಯೋಗ್ಯ ಕಂತುಗಳಮೂಲಕ ವಸೂಲ ಮಾಡುವದು ನಡೆದಿರುತ್ತದೆ.

ಈ ಮೇರೆಗೆ ಅನೇಕ ಕಾಯದೆ ಕಾನೂನುಗಳು ಮಾಡಲ್ಪಟ್ಟು, ಒಕ್ಕಲಿಗನ ಸಾಲದ ಭಾರವನ್ನು ಇಳಿಸಲು ಸರಕಾರದಿಂದ ಯತ್ನಗಳು ಮಾಡಲ್ಪಟ್ಟವು. ಈ ಬಗ್ಗೆ ಕೈಕೊಳ್ಳಬಹುದಾದ ಕೆಲವು ಉಪಾಯಗಳನ್ನು ಕೆಳಗೆ ಸೂಚಿಸುವೆವು.

(೧) ಹಿಂದುಸ್ಥಾನದ ಒಕ್ಕಲಿಗರ ಸಾಲ ಮುಕ್ತತೆಯ ಮಹದ್ವಾರವು ಸುಸಂಘಟಿತವಾದ ಸಹಕಾರೀ ಸಂಘಗಳ ಕೈಯ್ಯಲ್ಲಿದೆ. ಇವುಗಳ ಪ್ರಗತಿಯು ಹೆಚ್ಚು ಜಾರಿಯಿಂದ ಸಾಗುವಂತೆ ಜನರ ಮತ್ತು ಸರಕಾರದ ಸಹಾಯವು ಇವುಗಳಿಗೆ ಹೆಚ್ಚು ದೊರೆಯಬೇಕು. ಈಗಿದ್ದ ಸಂಘಗಳಿಗೆ, ಕಾಲಕಾಲಕ್ಕೆ ಸರಿಯಾಗಿ ಸರಕಾರವೂ, ಬ್ಯಾಂಕಿನವರೂ, ಶಹರದಲ್ಲಿಯ ಶೆಟ್ಟರೂ, ಹಳ್ಳಿಯ ಸಾವುಕಾರರೂ ಕೂಡಿ ಸಹಾಯ ಮಾಡಿದರೆ, ಇಷ್ಟರಿಂದಲೇ ಒಕ್ಕಲಿಗರ ಸಾಲವು ಇಲ್ಲದಾಗುವದು.

(೨) ಶಿಕ್ಷಣವಿಲ್ಲದೆ ಯಾವ ಕೆಲಸದಲ್ಲಿಯೂ ಪ್ರಗತಿಯಾಗಬಾರದು. ಹಳ್ಳಿಗಳಲ್ಲಿ ಶಿಕ್ಷಣದ ಪ್ರಸಾರವು, ಮುಖ್ಯವಾಗಿ ಔದ್ಯೋಗಿಕ

ಶಿಕ್ಷಣವು, ಹೆಚ್ಚು ಜಾರಿಯಿಂದ ಸಾಗಬೇಕು ಮತ್ತು ಒಕ್ಕಲಿಗರೆಲ್ಲರೂ ಅದರ ಲಾಭವನ್ನು ಪಡೆಯಲು ಮುಂದುವರಿಯಬೇಕು.

(೩) ಉಪಧಂದೆಗಳ ಜ್ಞಾನವನ್ನು ಒಕ್ಕಲಿಗರಲ್ಲಿ ಹೆಚ್ಚಿಸಿ, ಅವರು ಆ ಮೇರೆಗೆ ತಯಾರಿಸಬಹುದಾದ ವಸ್ತುಗಳ ಮಾರಾಟವನ್ನು ಸಹಕಾರೀ ತತ್ವದ ಮೇರೆಗೆ ಏರ್ಪಡಿಸಿದರೆ ಒಕ್ಕಲಿಗನಿಗೆ ಲಾಭ ವಾಗುವದು.

(೪) ಸಾವುಕಾರರಿಗೆ ಬರೆದುಕೊಟ್ಟಿರುವ ಹೊಲವನ್ನು ಇಂತಿಷ್ಟು ವರ್ಷಗಳವರೆಗೆ (ಪರಮಾವಧಿ ೨೦ ವರ್ಷ) ಅವರು ಉಪ ಭೋಗಿಸಿ, ತಿರುಗಿ ಅವುಗಳನ್ನು ಮಾಲಕರಿಗೆ ಬಿಟ್ಟುಕೊಡಬೇಕೆಂದು ಕಾಯಿದೆಯಾಗುವದು ವಿಹಿತವು.

(೫) ಹಳೇ ಸಾಲವನ್ನು ತೀರಿಸುವ ಕುರಿತು ಲ್ಯಾಂಡ ಮಾರ್ಗೇಜ ಬ್ಯಾಂಕುಗಳನ್ನು ( Land Mortgage Banks ) ಸ್ಥಾಪಿಸತಕ್ಕದ್ದು.

(೬) ಎಲ್ಲ ಪ್ರಾಂತಗಳಲ್ಲಿ ಹೆಚ್ಚಿನ ಬಡ್ಡಿಯ ಸಾಲಗಳ ಬಗ್ಗೆ ವಿಚಾರಣೆಯಾಗಬೇಕು. ಇದರಿಂದ ಸನ್ ೧೯೧೮ರಲ್ಲಿ ಹೊರಟ ಕಾಯಿದೆಯು ಎಷ್ಟರಮಟ್ಟಿಗೆ ಬಳಿಕೆಯಲ್ಲಿ ಬಂದಿದೆಂಬುದು ಕಂಡು ಬರುವದು.

(೭) ನ್ಯಾಯಖಾತೆಯ ವಾರ್ಷಿಕ ವರದಿಗಳಲ್ಲಿ ಮೇಲೆ ಕಾಣಿ ಸಿದ ಕಾಯಿದೆಯ ಮೂಲಕ ಒದಗಿದ ಹಿತಾಹಿತಗಳನ್ನು ಪ್ರತ್ಯೇಕವಾಗಿ ನಮೂದಿಸಬೇಕು.

(೮) "ಬಡ್ಡಿ ವ್ಯವಹಾರ" ವಡುವ ಸಾವುಕಾರರ ವಿಷಯವಾಗಿ ಇನ್ ಕಮ್ ಟ್ಯಾಕ್ಸ ಆಫೀಸರರು ( Income Tax Officers ) ಕಾಲಕಾಲಕ್ಕೆ ತಪಾಸಿಸಬೇಕು.

(೯) ಸಹಕಾರೀ ಸಂಘಗಳು ಎಲ್ಲ ಗ್ರಾಮಗಳಲ್ಲಿ ಬೇಗನೇ ಸ್ಥಾಪಿಸಲ್ಪಡಬೇಕು. ಈ ತರದ ಸಂಘಗಳಿಲ್ಲದ ಗ್ರಾಮಗಳಲ್ಲಿ ಸರಕಾರದವರೇ ಕೊಡಗೈಯಿಂದ ಮತ್ತು ಅಲ್ಪಬಡ್ಡಿಯ ಮೇಲೆ ತಗಾಯಿ ಸಾಲವನ್ನು ಕೊಡತಕ್ಕದ್ದು; ಮತ್ತು ಈ ಸಾಲವು ಸಕಾಲಕ್ಕೆ ಸಿಗುವಂತೆ ವ್ಯವಸ್ಥೆಯಾಗಬೇಕು.

(೧೦) ಅತಿವೃಷ್ಟಿ, ಅನಾವೃಷ್ಟಿ ಮೊದಲಾದ ದುರ್ಘಟಪ್ರಸಂಗವೊದಗಿದಲ್ಲಿ ಸರಕಾರವೂ, ಬ್ಯಾಂಕಿನವರೂ, ಸಹಕಾರೀ ಸಂಘಗಳೂ, ಸಾವುಕಾರ ಜನರೂ ತಕ್ಕ ಸಹಾಯಮಾಡಿ ಒಕ್ಕಲಿಗರಿಗೆ ಭಾರವಾಗದಂತೆ ನೋಡಿಕೊಳ್ಳಬೇಕು.

(೧೧) ಸದ್ಯದ ಪೋಸ್ಟಲ ಸೇವ್ಹಿಂಗ್ಸ ಬ್ಯಾಂಕಿನ (Postal Savings Bank) ಲಾಭವು ಎಲ್ಲ ಹಳ್ಳಿಗಳಿಗೆ ದೊರಕುವಂತೆ ಅವುಗಳ ಸಂಖ್ಯೆಯನ್ನು ಹೆಚ್ಚಿಸಬೇಕು. ಇವು ಹಣದ ಉಳಿತಾಯವನ್ನು ಕಲಿಸುವ ಪಾಠಸಾಲೆಗಳು.

(೧೨) ಸಾಲವನ್ನು ತೀರಿಸಲು ವಾರ್ಷಿಕ ಕಂತುಗಳನ್ನು ಗೊತ್ತುಪಡಿಸುವಾಗ್ಗೆ, ಒಕ್ಕಲಿಗರ ನಿತ್ಯದ ಖರ್ಚಿಗೆ ಎಂದರೆ, ಮನೆತನ ಮತ್ತು ಒಕ್ಕಲತನ ಸಾಗಿಸುವದಕ್ಕೆ ತಗಲುವ ಅವಶ್ಯ ಖರ್ಚಿಗೆ ಬೇಕಾಗುವಷ್ಟು ಹಣವನ್ನು ಬದಿಗಿಟ್ಟು ಗೊತ್ತುಪಡಿಸಬೇಕು.

(೧೩) ಸಾವುಕಾರ ಮತ್ತು ಸಾಲಗಾರ ಒಕ್ಕಲಿಗ ಇವರ ನಡುವಿನ ವ್ಯವಹಾರವನ್ನು ತೀರಿಸುವದಕ್ಕೆ ಪ್ರತ್ಯೇಕವಾಗಿ ಕಾಮದಾರರನ್ನು ಸಂಧಾನಮಂಡಳಗಳನ್ನೂ ( Arbitrators and Conciliation Boards ) ಏರ್ಪಡಿಸಬೇಕು.

(೧೪) ಯಾವಪ್ರದೇಶದಲ್ಲಿ ಒಕ್ಕಲಿಗರ ಸಾಲವು ಮಿತಿಮಿಾರಿ ಬೆಳೆದು ಹೋಗಿ, ಅದನ್ನು ತೀರಿಸಲಿಕ್ಕೆ ಶಕ್ಯವಿರುವದಿಲ್ಲವೋ, ಅಲ್ಲಿ ಸರಕಾರದವರು ಪ್ರತ್ಯೇಕವಾಗಿ ತಮ್ಮ ಅಮುಲದಾರರನ್ನು ನಿಯಮಿಸಿ ಒಕ್ಕಲಿಗರಿಗೆ ಹಾನಿಯಾಗದಂತೆ ಸಹಾಯಮಾಡಬೇಕು.

## Institutions for Rural Reconstruction

## ೯. ಗ್ರಾಮಸುಧಾರಣೆ ಸಂಸ್ಥೆಗಳು

ಈ ಪ್ರಪಂಚದಲ್ಲಿ— ಅದರಲ್ಲಿಯೂ ನಮ್ಮ ಹಿಂದೂ ದೇಶದಲ್ಲಿ ಸದ್ಯಕ್ಕೆ ವಿಚಾರವಿನಿಮಯವಾಗುತ್ತಲಿರುವ ಘನವಾದ ವಿಷಯವೆಂದರೆ ಗ್ರಾಮಸುಧಾರಣೆಯು. ಎತ್ತ ನೋಡಿದತ್ತ 'ಹಳ್ಳಿಗಳನ್ನು ಸುಧಾರಿಸರಿ, ಹಳ್ಳಿಗಳ ಪುನರ್ಘಟನೆಯನ್ನು ಕೊಳ್ಳಿರಿ,' ಇವೇ ಮೊದಲಾದವುಗಳು ಮೇಲಿಂದ ಮೇಲೆ ಕೇಳಬರುತ್ತಲಿದ್ದು ಹಲವೆಡೆಯಲ್ಲಿ ಈ ಬಗ್ಗೆ ಪ್ರಯತ್ನಗಳೂ ಸಹ ಈಗಾಗಲೇ ನಡೆದುಹೋಗಿವೆ. ಈ ವಿಷಯದ ಮೇಲೆ ಬಗೆಬಗೆಯ ನಿಬಂಧಗಳೂ ಪುಸ್ತಕಗಳೂ ಬಹಳಿರುವವು. ಅವೆಲ್ಲವುಗಳನ್ನು ಅಭ್ಯಾಸಿಸಲಿಕ್ಕೆ ನಮ್ಮ ಆಯುಷ್ಯವು ಸಾಲುವಂತಿಲ್ಲ ಆದರೂ ಸರ್ವಸಾಧಾರಣವಾಗಿ ಸಾಮುದಾಯಿಕ ರೀತಿಯಿಂದ ಅವುಗಳ ವಿಚಾರವಿನಿಮಯವನ್ನು ಮೇಲಿಂದ ಮೇಲೆ ಮಾಡುವದರ ಮೂಲಕ ಎಷ್ಟೋ ಲಾಭವಾಗುವದು.

ಹಿಂದೂ ದೇಶದ ನೈಸರ್ಗಿಕ ರಚನೆಯನ್ನವಲೋಕಿಸಿದರೆ ಹೊಳೆ ಹಳ್ಳ-ದರಿ-ಕಂದರಗಳಿಂದಲೂ ಮಹತ್ತರವಾದ ಅಡವಿ ಘೋರಾರಣ್ಯಗಳಿಂದಲೂ ಅದು ತುಂಬಿಕೊಂಡಿದ್ದು ಅದರ ೩೫ ಕೋಟಿ ಜನರಲ್ಲಿ ೨೮ ಕೋಟಿ ಜನರು ಸುಮಾರು ೭ ಲಕ್ಷ ಹಳ್ಳಿಗಳಲ್ಲಿದ್ದು, ಇನ್ನುಳಿದ ಜನರು ಸುಮಾರು ಎರಡು ಸಾವಿರ ಶಹರಗಳಲ್ಲಿದ್ದುದು ಕಂಡುಬರುವದು. ಹಳ್ಳಿಗಳಲ್ಲಿರುವವರಲ್ಲಿ ಒಕ್ಕಲತನವೇ ಬಹು ಜನರ ಮುಖ್ಯ

ಉದ್ಯೋಗವಾಗಿದೆ. ಅದರಲ್ಲಿ ೧೦೦ಕ್ಕೆ ೯೦ ರಂತೆ ಅಶಿಕ್ಷಿತರಿರುವರು. ಇದರ ಮೇಲಿಂದ ನೋಡಲಾಗಿ ದೇಶದ ಕಲ್ಯಾಣವನ್ನಿಚ್ಛಿಸುವವರು ಒಕ್ಕಲಿಗರ ಉತ್ಪನ್ನವನ್ನು ಹೆಚ್ಚಿಸಲಿಕ್ಕೆ ಕಾರಣರಾಗಿ ಅವರ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸುವದು ಅತ್ಯಾವಶ್ಯಕವಿರುವದೆಂಬ ಸಂಗತಿಯನ್ನು ಚನ್ನಾಗಿ ಲಕ್ಷ್ಯದಲ್ಲಿ ತರತಕ್ಕದ್ದು.

ಪೂರ್ವಕಾಲದ ಹಳ್ಳಿಗಳ ಸ್ಥಿತಿಯ ಬಗ್ಗೆ ತುಸು ವಿಚಾರಮಾಡಿ ನೋಡಿದರೆ ಅವು ಸ್ವಯಂಪೋಷಕವಿದ್ದದ್ದು ಕಂಡುಬರುವದು. ಜನರು ಈಗಿನಂತೆ ಉದ್ಯೋಗದ ಮೇಲಾಟದ ರಭಸಕ್ಕೆ ಹೋಗದೆ, ಬೇರೆ ಬೇರೆ ಉದ್ಯೋಗಗಳನ್ನು ಬೇರೆ ಬೇರೆ ಸಮಾಜದವರು ನಿಷ್ಠೆಯಿಂದ ಮಾಡಿ ತಮ್ಮ ತಮ್ಮ ಗ್ರಾಮಗಳನ್ನು ಸಂಪೂರ್ಣ ಸ್ಥಿತಿಯಲ್ಲಿರಿಸಿದ್ದರು. ಈ ರೀತಿಯಲ್ಲಿ ಒಬ್ಬರು ಮತ್ತೊಬ್ಬರ ಸಲುವಾಗಿ ಶ್ರಮಬಡುವದಕ್ಕಾಗಿ ಅವರವರಿಗೆ ಗೊತ್ತುಪಡಿಸಿದ ಧಾನ್ಯದ ರೂಪದಲ್ಲಿ ಸಹಾಯಮಾಡುವ ಪದ್ಧತಿಯು-ಇದಕ್ಕೆ ವಿನಿಮಯವೆನ್ನುವರು-ಅಮಲಿನಲ್ಲಿದ್ದಿತು. ಗ್ರಾಮಪಂಚಾಯತಿಯ ಪದ್ಧತಿಯು ಇದ್ದು ಅದರ ಮುಖಾಂತರ - ಕಾಸು ಸಹ ಖರ್ಚಿಗೊಳಗಾಗದೆ - ತಮ್ಮ ತಮ್ಮ ನ್ಯಾಯಗಳನ್ನು ಹೋಗಲಾಡಿಸಿಕೊಳ್ಳುತ್ತಿದ್ದರು, ಗ್ರಾಮಗಳಲ್ಲಿ ದೇವಾಲಯಗಳ ಬಗೆ ಬಗೆಯ ಉತ್ಸವದ ಕಾರ್ಯಕ್ರಮಗಳನ್ನು ಗೊತ್ತುಪಡಿಸಿಕೊಂಡು ಅವುಗಳ ಮುಖಾಂತರ ಕೀರ್ತನ, ಪುರಾಣ, ಜಾತ್ರೆ ಮೊದಲಾದವುಗಳಿಂದ ಹಳ್ಳಿಗರಿಗೆ ಸಾಮಾಜಿಕ ಶಿಕ್ಷಣವನ್ನು ಕೊಡುವದರಲ್ಲಿ ಬರುತ್ತಿತ್ತು. ಈ ತರಹದ ವ್ಯವಸ್ಥೆಯಿಂದ ಹಳ್ಳಿಗರಲ್ಲಿ ಪರಸ್ಪರ ಪ್ರೇಮಭಾವವಿದ್ದು ಕೊಂಡು, ಒಟ್ಟಿನಲ್ಲಿ, ಸಂಪೂರ್ಣ ಹಳ್ಳಿಯು ಸುಖವಾಗಿರಲೆಂದು ಪ್ರತಿಯೊಬ್ಬನು ಹಾರೈಸುತ್ತಿದ್ದನು ಇರಲಿ.

ಕಳೆದ ಮುಕ್ಕಾಲು ಶತಮಾನದಿಂದ ಶಹರಗಳ ಘಟನೆಯ ಕಡೆಗೆ ಜನಮನವು ಒಲಿಯಹತ್ತಿದೆ. ಗ್ರಾಮಪಂಚಾಯತಿಯ ಪದ್ಧ

ತಿಯಬದಲು ಕೋರ್ಟ ಕಚೇರಿಗಳು ಆ ಕೆಲಸವನ್ನು ಮಾಡುತ್ತಲಿರು ವವು. ಉಚ್ಚತರದ ಶಿಕ್ಷಣಾಲಯಗಳೆಲ್ಲ ಶಹರಗಳಲ್ಲಿರುವದರಿಂದ ಹಳ್ಳಿಗಳಲ್ಲಿದ್ದುಕೊಂಡು ತಮ್ಮ ಉನ್ನತಿಯನ್ನಿಚ್ಛಿಸುವಂತಹ ಜನರು ತಮ್ಮ ತಮ್ಮ ಬಾಲಕರ ಶಿಕ್ಷಣದ ಸಲುವಾಗಿಯೂ ಬೇರೆ ಬೇರೆ ಉದ್ಯೋಗಗಳ ಸಲುವಾಗಿಯೂ, ಶಹರಗಳಲ್ಲಿ ಮನೆಮಾಡಿಕೊಂಡು ಇರಹತ್ತಿದರು. ಹಳ್ಳಿಯ ಉತ್ತಮೋತ್ತಮವಾದ ದನಕರುಗಳು ಪಟ್ಟಣಕ್ಕೆ ಬರಲಾರಂಭಿಸಿದವು. ಪಟ್ಟಣಗಳ ವ್ಯಾಪಾರವು ಬೆಳೆದುದ ರಿಂದ, ವ್ಯಾಪಾರಕ್ಕಾಗಿಯೂ, ನ್ಯಾಯಾಲಯಗಳನ್ನು ಹೋಗಲಾಡಿಸಿ ಕೊಳ್ಳುವುದಕ್ಕಾಗಿಯೂ, ಹಳ್ಳಿಗರು ಮೇಲಿಂದ ಮೇಲೆ ಪಟ್ಟಣಗಳಿಗೆ ಬರಹೋಗುವ ಪ್ರಸಂಗಗಳು ಬಂದವು. ಇದರಿಂದ ಅವರಲ್ಲಿದ್ದ ಅಲ್ಪ ಸ್ವಲ್ಪ ಹಣವು ಪಟ್ಟಣಗಳಲ್ಲಿ 'ಚಯನಿಯ, ಸಲುವಾಗಿ ಖರ್ಚಾ ಗಹತ್ತಿತು. ಒಟ್ಟಿನಲ್ಲಿ ಹೇಳುವದೇನಂದರೆ ಯಾವತ್ತೂ ಮೇಲ್ತರದ ಪದಾರ್ಥಗಳ ಶೇಖರವು ಪಟ್ಟಣಗಳ ಕಡೆಗೆ ಹೊರಳಿ ಅವು ಸಂಪನ್ನ ವಾಗಿ ಹಳ್ಳಿಗಳು ದರಿದ್ರವಾದವು. ಮೊದಲು ಮೊದಲು ಹಳ್ಳಿಗಳಿಂದ ಹೊರಗೆ ಹೋದಂತಹ ಜನರಿಗೆ ಶಹರಗಳಲ್ಲಿ ನಾಲ್ಕು ದುಡ್ಡುಗಳು ದೊರೆತಾಗ್ಯೂ ಅವರು ಅವುಗಳನ್ನು ತಮ್ಮ ಉಪಯೋಗಕ್ಕಾಗಿ ಮನೆಗೆ ತರುತ್ತಿದ್ದರು. ಆದರೆ ಕೆಲವು ಸಂವತ್ಸರಗಳ ತರುವಾಯ ಶಿಕ್ಷಣ, ದುಡ್ಡು ಮೊದಲಾದವುಗಳ ಆಚಾರ ವಿಹಾರಗಳ ವಿಷಯಗಳಲ್ಲಿ ಒಂದೇ ಕುಟುಂಬದಲ್ಲಿರತಕ್ಕ ಶಹರಗಳ ಜನರಿಗೂ ಹಳ್ಳಿಯ ಜನರಿಗೂ ಹೆಚ್ಚು ಕಡಿಮೆಯಾಗಹತ್ತಿ 'ಕಣ್ಣಿಗೆ ನುಣ್ಣಗಿರುವದೆಲ್ಲಾ ನೆಟ್ಟಗೆ, ಎಂಬ ಭಾವ ನೆಯುಂಟಾಗಿ ಪ್ರತಿಯೊಬ್ಬ ತಂದೆಯು ತನ್ನ ಹುಷಾರಿ ಮಗನನ್ನು ಪಟ್ಟಣಕ್ಕೆ ಕಳುಹಿಸುವ ಇಚ್ಛೆಯನ್ನು ತೋರಿಸಹತ್ತಿದನು. ಇದಲ್ಲದೆ ಪಟ್ಟಣದಲ್ಲಿದ್ದುಕೊಂಡು ನೌಕರಿ ಮಾಡುವಂತಹ ಜನರಿಗೆ-ಅಂದರೆ ಯಾರು ಹೆಚ್ಚು ಪಾರತಂತ್ರ್ಯದಲ್ಲಿರುವರೋ ಅಂಥವರಿಗೆ - ಹಳ್ಳಿಗರು ಅಂದರೆ ಹೆಚ್ಚು ಸ್ವತಂತ್ರದಲ್ಲಿರುವವರು ಮನ್ನಣೆಯನ್ನು ಮಾಡಹತ್ತಿ

ದರು. ಇದರ ಮೂಲಕ, ವಿಚಾರವಂತರೂ ಶೋಧಕ ಬುದ್ಧಿಯುಳ್ಳ ವರೂ ಶಹರಗಳಲ್ಲಿ ಹೋಗಿ ಇರಹತ್ತಿದರಿಂದ ಹಳ್ಳಿಗಳಲ್ಲಿ ಯೋಗ್ಯ ಮಾರ್ಗದರ್ಶಕರಿಲ್ಲದಂತಾಗಿ (ಹಳ್ಳಿಗಳಿಗೆ) ಅಪರಿಮಿತಹಾನಿಯೊದ ಗಿತು. ಹಳ್ಳಿಗಳಲ್ಲಿ ಪಂಗಡಗಳುದ್ಭವಿಸಿ, ದ್ವೇಷಾಸೂಯೆಗಳು ಹೆಚ್ಚಿ ತಮ್ಮ ತಮ್ಮೊಳಗೆ ಬಡಿದಾಡಹತ್ತಿದರು; ಕೋರ್ಟ ಕಚೇರಿಗಳಿಗೆ ಎಡ ತಾಕಹತ್ತಿದರು; ಸಾಲಗೋಯ್ಕರಾದರು; ನೀತಿಗೆ ಬೆಲೆಯಿಲ್ಲದಾ ಯಿತು; ಈ ಪ್ರಕಾರ ಹಳ್ಳಿಯ ಪರಿಸ್ಥಿತಿಯು ಹೇಳಕೂಡದಷ್ಟು ನಿಕೃಷ್ಟಾವಸ್ಥೆಗೆ ಬಂದುಬಿಟ್ಟಿತು.

ಈ ತರಹದ ಸ್ಥಿತಿಯನ್ನು ಸುಧಾರಿಸುವ ಸಲುವಾಗಿ ಇತ್ತೀಚೆಗೆ ಪ್ರಸಿದ್ಧಿಸಲ್ಪಟ್ಟ " Village Uplift in India " ಈ ಪುಸ್ತಕದಿಂದ ಮೆ॥ ಎಫ್. ಎಲ್. ಬ್ರೇನ I. C. S., ಡೆಪ್ಯೂಟಿ ಕಮೀಶನರ ಗುರುಗಾಂವ ( ಪಂಜಾಬ ) ಇವರು ಗುರುಗಾಂವ ಜಿಲ್ಹೆಯೊಳಗಿನ ಯಾವತ್ತೂ ೧೪೦೦ ಹಳ್ಳಿಗಳ ಒಕ್ಕಲಿಗರ ಪರಿಸ್ಥಿತಿಯನ್ನು ಸುಧಾರಿಸುವ ಪ್ರಯತ್ನವನ್ನು ಮಾಡಿರುವದು ಕಂಡುಬರುತ್ತದೆ. ಇವರು ಸ್ವತಃ ಹಳ್ಳಿಗಳಲ್ಲಿ ತಿರುಗಾಡಿ ಅಲ್ಲಲ್ಲಿರುವ ಜಮೀನುಗಳ ಸಣ್ಣ ಸಣ್ಣ ಭಾಗಗಳಿಂದ ಒಕ್ಕಲತನಕ್ಕೆ ಯಾವಪ್ರಕಾರದ ಅಡ್ಡಿಯಾಗುತ್ತ ದೆಂಬುದನ್ನು ನೋಡಿದರು; ಮತ್ತು ಸುಧಾರಿಸಿದ ಬೀಜಗಳನ್ನುಪ ಯೋಗಿಸದಿರುವದು, ಒಂದೇತರದ ಪೈರನ್ನು ಒಂದೇ ಕಡೆಯಲ್ಲಿ ಮೇಲಿಂದಮೇಲೆ ಬೆಳೆಯಿಸುವದು, ಇವುಗಳ ಮೂಲಕ ಒಕ್ಕಲಿಗರಿಗೆ ಯಾವ ಯಾವ ರೀತಿಯಿಂದ ಹಾನಿಯಾಗುತ್ತದೆಂಬುದನ್ನು ತಿಳಿದು ಕೊಂಡರು. ಒಕ್ಕಲಿಗರ ಗುಡಿಸಲುಗಳನ್ನು ನೋಡಲಾಗಿ ಅವರು ಅಷ್ಟೊಂದು ಹೊಲಸು ರೀತಿಯಲ್ಲಿ ಅವ್ಯವಸ್ಥಿತ ರೀತಿಯಿಂದಿರುವ ದನ್ನು ಕಂಡರು. ಇವೆಲ್ಲವುಗಳನ್ನೆಲ್ಲ ಮನನಮಾಡಿ, ಒಕ್ಕಲಿಗರಿಗೆ ತುಸು ಮಾರ್ಗವನ್ನು ತೋರಿಸಿದರೆ ಅವರು ಅವರ ಸ್ಥಿತಿಯು ಸುಧಾ ರಿಸಬಹುದೆಂದು ಅವರಿಗೆ ಹೊಳೆಯಿತು.

ಈ ವಿಷಯದಲ್ಲಿ ಅವರು ಕೈಕೊಂಡ ಕಾರ್ಯವನ್ನೂ ಮತ್ತು ಅವರ ಅಭಿಪ್ರಾಯಗಳನ್ನೂ ಇದರಡಿಯಲ್ಲಿ ಬರೆದಿರುವೆವು.

'ಒಕ್ಕಲಿಗರ ಉನ್ನತ ಮತ್ತು ಅವನತ ಸ್ಥಿತಿಗತಿಗಳು ಅವರನ್ನೇ ಅವಲಂಭಿಸಿರುವವು, 'ಮಿತವ್ಯಯದ ತತ್ವವನ್ನು ಅವರಿಗೆ ಕಲಿಸಿದರೆ ಅವರ ಸಾಂಪತ್ತಿಕ ಸ್ಥಿತಿಯು ಸುಧಾರಿಸುವದು, ಈ ಮೊದಲಾದ ವಿಷಯಗಳು ಅವರಿಗೆ ಮನದಟ್ಟಾಗುವಂತೆ ಸಿನೇಮಾ, ಮ್ಯಾಜಿಕ್ ಲ್ಯಾಂಟರ್ನ ಹಾಗೂ ನಾಟಕಗಳ ಮುಖಾಂತರ ಅವರಿಗೆ ಜ್ಞಾನವಮಾಡಿ ಕೊಟ್ಟದ್ದಲ್ಲದೆ ಪ್ರತಿಯೊಂದು ಹಳ್ಳಿಗೆ ಅವರು ಸ್ವತ: ಹೋಗಿ ಒಕ್ಕಲಿಗರ ಪ್ರತ್ಯಕ್ಷ ಸೇವೆಯನ್ನುಮಾಡಿ, ಸಾರ್ವಜನಿಕ ಸೇವೆಯ ಮಹತ್ವವು ಅವರ ಮನಸ್ಸಿನಲ್ಲಿ ನಾಟುವಂತೆ ಮಾಡಿದರು; ಒಕ್ಕಲಿಗರ ಜೀವನದ ಧ್ಯೇಯವು ಅಕುಂಚಿತವಾಗಿರುವದನ್ನು ಕಂಡು ಅದನ್ನು ವಿಸ್ತಾರಗೊಳಿಸಿ ಮಹತ್ವಾಕಾಂಕ್ಷೆಯ ಬೀಜವನ್ನು ಅವರ ಹೃದಯದಲ್ಲಿ ಬೇರೂರಿದರು.

ಹೀಗೆ ಹಲವುತರದಿಂದ, ಸಾಧ್ಯವಿದ್ದಮಟ್ಟಿಗೆ ಸ್ವಲ್ಪದರದಲ್ಲಿಯೇ ಉಚ್ಚತರಗತಿಯ ಮಾರ್ಗವನ್ನು ಅವರಿಗೆ ತೋರಿಸಿಕೊಟ್ಟರು.

ಹಳ್ಳಿಯು ಸುಖಸಂಪನ್ನವಾಗಬೇಕು, ಪೈರುಗಳು ಚನ್ನಾಗಿ ಫಲಿಸಬೇಕು, ಒಕ್ಕಲಿಗರ ಮಕ್ಕಳು ಸಶಕ್ತರಾಗಿರಬೇಕು, ಮತ್ತು ಅವರ ದನಕರುಗಳು ಧಷ್ಟ ಪುಷ್ಟವಾಗಿರಬೇಕೆಂಬ ವಿಷಯದಲ್ಲಿ ಮಿ॥ ಬ್ರೇನ ಸಾಹೇಬರ ಅಭಿಪ್ರಾಯಗಳು ಹೀಗಿರುವವು.

(೧) ಈಗಿನ ಒಕ್ಕಲಿಗನ ಒಕ್ಕಲತನದ ಮಾದರಿಯು ಆರ್ಥಿಕ ದೃಷ್ಟಿಯಿಂದ ಲಾಭಕರವಾಗಿರುವದಿಲ್ಲ.

(೨) ಅವನ ಮನೆಯ ಮತ್ತು ಸುತ್ತಮುತ್ತಲಿನ ಸ್ಥಳವು ಅಸ್ವಚ್ಛವಿರುವದು.

(೩) ಅವನು ವಾಸಿಸುವ ಊರು ಹೊಲಸಿನಿಂದ ತುಂಬಿ, ರೋಗಗಳು ಹುಟ್ಟುವವು.

(೪) ಹತ್ತರಿರುವ ಅಲ್ಪಸ್ವಲ್ಪ ಹಣವನ್ನು ಅವನು ಲಗ್ನ ಮಂತಾದವುಗಳಲ್ಲಿ ಖರ್ಚು ಮಾಡುತ್ತಾನೆ.

(೫) ಅವನು ತನ್ನ ಸ್ಥಿತಿಗತಿಗಳ ವಿಷಯದಲ್ಲಿ ನಿರಾಶವಾದಿ ಯಾಗಿ ಅವನ್ನು ಸುಧಾರಿಸಲಿಕ್ಕೆ ಎಂದೂ ಮನಸ್ಸು ಮಾಡುವದಿಲ್ಲ.

(೬) ತನ್ನ ಮತ್ತು ತನ್ನ ಎಡಬಲಕ್ಕಿರುವವರ ಸುಧಾರಣೆಯನ್ನು ಮಾಡುವ ವಿಚಾರದಲ್ಲಿಯಾಗಲಿ ಅಥವಾ ಅವುಗಳನ್ನು ಪ್ರತ್ಯಕ್ಷ ನೋಡುವದರಲ್ಲಿಯಾಗಲಿ ವೇಳೆಯನ್ನು ಖರ್ಚುಮಾಡುವದಿಲ್ಲ.

(೭) ಅವನು ಸಾಧಾರಣವಾಗಿ ಅಶಿಕ್ಷಿತನಿದ್ದು ಹಳೇ ಪದ್ಧತಿ ಗಳಿಗೆ ಅಂಟಿಕೊಂಡಿರುವನು.

(೮) ಬೇರೆ ಬೇರೆ ದೇಶಗಳೊಳಗೆ ಯಾವ ಯಾವ ವಿಷಯ ಗಳಲ್ಲಿ ಯಾವ ಯಾವ ಸುಧಾರಣೆಗಳಾಗಿರುವವೆಂಬದನ್ನು ಅವನು ತಿಳಿದುಕೊಳ್ಳಲಿಕ್ಕೆ ಮನಸ್ಸುಮಾಡುವುದಿಲ್ಲ.

ಮೆ॥ ರವರು ತೀರ ಸಣ್ಣ ಕಲ್ಪನೆಗಳಿಂದಲೇ ಮೇಲಿನ ವಿಷಯ ಗಳಲ್ಲೆಲ್ಲಾ ಸುಧಾರಣೆಯ ಕ್ರಾಂತಿಯನ್ನುಂಟುಮಾಡಿದರು. ಮೇಲ್ತ ರದ ದನಕರಗಳನ್ನು ಸಾಕುವದು, ಸುಧಾರಿಸಿದ ಬೀಜ ಗೊಬ್ಬರಗ ಳನ್ನೂ ಒಕ್ಕಲತನ ಆಯುಧಗಳನ್ನೂ ಉಪಯೋಗಿಸುವದು, ವಿಭಾಗ ವಾದ ಸಾಗುವಳಿಯ ಭೂಮಿಯ ತುಂಡುಗಳನ್ನು ಒಟ್ಟುಮಾಡುವದು, ನದಿಗಳಿಗೆ ಒಡ್ಡುಕಟ್ಟಿ ಭೂಮಿಗಳಿಗೆ ನೀರು ತೆಗೆದುಕೊಂಡು ಮತ್ತೊಂದು ಹೆಚ್ಚಿಗೆ ಉತ್ಪನ್ನ ಕೊಡುವ ಬೆಳೆಯನ್ನು ತೆಗೆದುಕೊಳ್ಳು ವದು, ಪೇಟೆಯಲ್ಲಿ ಜೆಚ್ಚಾಗಿ ಮಾರಲ್ಪಡುವ ಪೈರನ್ನೇ ಬೆಳೆಯಿಸುವದು ಹೊಲದಲ್ಲಿ ತೆಗ್ಗು ತೋಡಿ ಅದರಲ್ಲಿ ಕಸಕಡ್ಡಿಗಳನ್ನು ಚಲ್ಲಿಕೊಟ್ಟು

ಗೊಬ್ಬರಮಾಡುವದು ಇವೇ ಮೊದಲಾದವುಗಳ ಸುಧಾರಣೆಯನ್ನು ಮಾಡುವದರ ಕಡೆಗೆ ಜನಮನವನ್ನು ಹೊರಳಿಸಿದರು.

ದನಗಳ ಸೆಗಣಿಯನ್ನು ಸುಡುವುದರ ಬದಲಾಗಿ ಅದರಿಂದ ಗೊಬ್ಬರವನ್ನು ಮಾಡುವ ರೀತಿಯನ್ನು ಕಲಿಸಿದರು. ಮರಡಿಗಳಲ್ಲಿಯೂ ಪಡಭೂಮಿಗಳಲ್ಲಿಯೂ ಗಿಡಗಳನ್ನು ಹಚ್ಚಲಿಕ್ಕೆ ಉಪದೇಶಿಸಿದರು; ಸ್ವಲ್ಪ ಖರ್ಚಿನಿಂದ ಹೆಚ್ಚು ಭೂಮಿಯನ್ನು ಸಾಗುಮಾಡಿ ಉತ್ಪನ್ನ ವನ್ನು ಹೆಚ್ಚಿಸುವ ಕ್ರಮಗಳನ್ನು ಹೇಳಿದರು. ಹಳ್ಳಿಯ ಆರೋಗ್ಯ ವನ್ನು ಕಾಯ್ದುಕೊಳ್ಳುವ ರೀತಿಯನ್ನು ಚನ್ನಾಗಿ ಕಲಿಸಿಕೊಟ್ಟರು. ಈ ಕೆಲಸದಲ್ಲಿ ಮೆ|| ರವರ ಪತ್ನಿಯೂ, ಲೋಕಲ್ ಬೋರ್ಡ ಮೆಂಬ ರರೂ, ಬಿನ್ ಸರಕಾರೀ ಗೃಹಸ್ಥರೂ, ಮತ್ತು ಸಾರ್ವಜನಿಕ ಕೆಲಸ ಮಾಡುವವರೂ ಅವರಿಗೆ ಹಲವು ರೀತಿಗಳಿಂದ ನೆರವಾದರು. ಇರಲಿ.

ಈ ತರಹದ ಕಾರ್ಯಗಳು ಕೈಗೂಡಬೇಕಾದರೆ ನಿಯಮಬದ್ಧ ಸಂಸ್ಥೆಗಳಿದ್ದು ಅವುಗಳಿಗೆ ತುಸುಮಟ್ಟಿಗೆ ಅಧಿಕಾರವನ್ನು ಕೊಡಲಿಕ್ಕೆ ಬೇಕು. ಈ ವಿಷಯವಾಗಿ ಸಹಕಾರೀ ಚಳವಳಿಯ ಸಹಾಯದಿಂದ ಕೆಳಗೆ ಬರೆದ ಯೋಜನೆಗಳನ್ನು ಕೈಕೊಳ್ಳಬಹುದು:—

(೧) ಒಕ್ಕಲಿಗರೊಳಗೆ ಕೂಡಿಕೊಂಡು, ವಿಚಾರವಿನಿಮಯಗಳಿಂದ ಅವರ ಹೀನಸ್ಥಿತಿಯನ್ನು ಸುಧಾರಿಸುವದಕ್ಕಾಗಿ ಮಾಯಾಲಾಂದರವನ್ನು ಉಪಯೋಗಿಸಬಹುದು.

(೨) ಊರಲ್ಲಿ ಹೋಗಿಬರುವ ಹಾದಿಯನ್ನು ದುರಸ್ತ ಮಾಡಬೇಕು.

(೩) ಊರನ್ನು ಸ್ವಚ್ಛವಾಗಿಡಿಸಬೇಕು.

(೪) ಆರೋಗ್ಯರಕ್ಷಣೆಯ ಮತ್ತು ಔಷಧಗಳ ಯೋಗ್ಯ ವ್ಯವಸ್ಥೆಯನ್ನಿಡಬೇಕು.

(೫) ಹಳ್ಳಿಗರು ತಮ್ಮೊಳಗಿನ ವ್ಯಾಜ್ಯಗಳನ್ನು ತಮ್ಮ ತಮ್ಮ ಲ್ಲಿಯೇ ತೀರಿಸಿಕೊಳ್ಳಬೇಕು.

(೬) ಒಕ್ಕಲಿಗರನ್ನೂ ಒಕ್ಕಲತನವನ್ನೂ ಸುಧಾರಿಸಬೇಕು.

ಮೇಲೆ ವಿವರಿಸಿದ ಕಾರ್ಯಗಳಿಗೆ ಕೆಳಗೆ ಬರೆದ ರೀತಿಯಲ್ಲಿ ಹಣವನ್ನು ಕೂಡಿಸಬಹುದು.

(೧) ಒಕ್ಕಲಿಗರಿಂದ ವರ್ಗಣಿಯನ್ನು ಕೂಡಿಸಬೇಕು. (೨) ಲೋಕಲ್ ಬೋರ್ಡುಗಳಿಂದ ದೇಣಿಗೆಯನ್ನು ದೊರಕಿಸಬೇಕು. (೩) ಸಹಕಾರೀ ಸಂಘಗಳ ಧರ್ಮಾರ್ಥ ಫಂಡಿನಿಂದ ಸಹಾಯ ಪಡೆಯುವದು. (೪) ಧನಿಕರಿಂದ ದೇಣಿಗೆಯನ್ನು ದೊರಕಿಸುವದು.

ಈ ಕ್ರಮದಂತೆ ಹಲವು ಪ್ರಯೋಗಗಳು ನಡೆದಿದ್ದು ಬೇರೆ ಸಹಕಾರೀ ಸಂಘಗಳಾದರೂ ತಮ್ಮ ತಮ್ಮ ಗ್ರಾಮಗಳ ಸುಧಾರಣೆ ಯನ್ನು ಮಾಡಿಕೊಳ್ಳಲು ಮುಂದೆ ಬರುವವೆಂದು ನಂಬಿದ್ದೇವೆ.

## (೧೦) ಹಳ್ಳಿಗಳ ಪುನರ್ಘಟನೆಯು
## Rural Reconstruction.

ಹಳ್ಳಿಗೂ ಒಕ್ಕಲತನಕ್ಕೂ ಅನ್ಯೋನ್ಯ ನಿಕಟ ಸಂಬಂಧವಿರುವ ದೆಂದು ಬೇರೆ ಹೇಳಲು ಕಾರಣವಿಲ್ಲ. ಹಳ್ಳಿಯ ಹೊರತು ಒಕ್ಕಲ ತನಕ್ಕೂ ಒಕ್ಕಲತನದ ಹೊರತು ಹಳ್ಳಿಗೂ ಮಹತ್ವವಿಲ್ಲ. ಈ ದೃಷ್ಟಿ ಯಿಂದ ಹಿಂದುಸ್ತಾನದೊಳಗಿನ ಹಳ್ಳಿಗಳ ಪರಿಸ್ಥಿತಿಯನ್ನು ನೋಡಿ ದರೆ ಅವುಗಳ ಪುನರ್ಘಟನೆಯನ್ನು ಮಾಡುವದು ಎಷ್ಟು ಅವಶ್ಯವಿರು ತ್ತದೆಂಬುವದು ಕಂಡು ಬರುವದು.

### ಪೂರ್ವದ ಪರಿಸ್ಥಿತಿ

ನಮ್ಮ ದೇಶದ ಪೂರ್ವಕಾಲದ ಪರಿಸ್ಥಿತಿಯನ್ನವಲೋಕಿಸಿದರೆ ಕಂಡುಬರುವ ಸಂಗತಿಯಂದರೆ—ಹಿಂದುಸ್ತಾನದ ದೇಶವು ಪಾಶ್ಚಾತ್ಯ

ರಾಷ್ಟ್ರಗಳಂತೆ ದೊಡ್ಡದೊಡ್ಡ ಪಟ್ಟಣಗಳಿಂದ ಕೂಡಿದ್ದಾಗಿರದೆ, ಪ್ರತಿಯೊಂದು ಸಣ್ಣ ದೊಡ್ಡ ಹಳ್ಳಿಯು ಅಚ್ಚುಕಟ್ಟಾದ ಕಲ್ಲುಗಳ ಗುರುತುಗಳಿಂದ ಅಲ್ಲಿಯ ಜನರ ಕೌಸಲ್ಯತೆಯನ್ನು ವ್ಯಕ್ತಪಡಿಸುವ ರಾಷ್ಟ್ರಮಂದಿರದ ತಳಹದಿಯ ಹೆಗ್ಗಟ್ಟನ್ನು ತೋರಿಸುವಂತೆ ನಿಲ್ಲಿಸುವದರಲ್ಲಿ ಬಂದಿತ್ತು. ಈ ಹಳ್ಳಿಯು ನಮ್ಮ ರಾಷ್ಟ್ರಪುರುಷನ ಅವಶ್ಯವಾದ ಅವಯವವಿದ್ದು ಪ್ರತಿಯೊಬ್ಬರಿಗೆ ರಾಷ್ಟ್ರಸಂವರ್ಧನವನ್ನು ಮಾಡಲಿಕ್ಕೆ ಶ್ರಮವಿಭಾಗದ ಪದ್ಧತಿಯಮೇಲೆ ಕಾರ್ಯಗಳನ್ನು ಗೊತ್ತುಪಡಿಸಿತ್ತು. ಈ ಯೋಗದಿಂದ ರಾಜಶಾಸನ ಯಂತ್ರವು ಸಹಕಾರವೆಂಬ ಸ್ನಿಗ್ಧವಾದ ಎಣ್ಣೆಯಿಂದೊಡಗೂಡಿಕೊಂಡು ಸುಸೂತ್ರವಾಗಿ ನಡೆಯುತ್ತಿತ್ತು. ಪ್ರತಿಯೊಂದು ಹಳ್ಳಿಯು ಈ ರಾಷ್ಟ್ರಪುರುಷನ ಒಂದೊಂದು ಅವಯವವೆಂದು ತಿಳಿದು ಅದು ಸಂಪೂರ್ಣ ಮತ್ತು ಸ್ವಯಂ ಸಿದ್ಧವಿರುತ್ತಿತ್ತು. ಇದರ ವಿರುದ್ಧ

## ಈಗಿನ ಪರಿಸ್ಥಿತಿ.

ಏನಿರುತ್ತದೆಂಬದನ್ನು ಕಂಡುಕೊಳ್ಳುವಾ. ಯಾವ ಹಿಂದುಸ್ಥಾನವು ಒಂದುಕಾಲದಲ್ಲಿ ವಿದ್ಯದ ತವರಮನೆಯೆಂದು ಪ್ರಸಿದ್ಧವಿದ್ದಿತೋ, ಯಾವ ಹಿಂದುಸ್ಥಾನದಲ್ಲಿ ಸದೈವ ಜ್ಞಾನದೀಪದ ಜ್ಯೋತಿಯು ಬೆಳಗಿ, ಅದರ ಪ್ರಕಾಶಕ್ಕೆ ಚೀನದಂಥ ದೂರದೂರದ ಜನರು ಸಹ ಮೈಮರೆತು ಆಶ್ಚರ್ಯಚಕಿತರಾಗಿ ಬೊಟ್ಟು ಕಚ್ಚುತ್ತಿದ್ದರೋ, ಅದೇ ಹಿಂದುಸ್ಥಾನದಲ್ಲಿ ಈಗ ೧೦೦ ಕ್ಕೆ ೬ ರಂತೆ ಸಹ ಅಕ್ಷರ ಜ್ಞಾನವಿದ್ದವರು ಇರುವದಿಲ್ಲ! ಇದು ದೇಶದ ದುರ್ದೈವವಲ್ಲದೆ ಮತ್ತೇನು?

ಯಾವ ಆರ್ಯಾವರ್ತದಲ್ಲಿ ಭೀಮ, ಭಿಷ್ಮ, ವಿಕ್ರಮಾದಿತ್ಯ, ಪುಲಿಕೇಶಿ ಮತ್ತು ಬಸವರಾಜರಂಥ ಅವತಾರಿಕ ಪುರುಷರು ಆಗಿಹೋದರೋ, ಅದೇ ಆರ್ಯಾವರ್ತದಲ್ಲಿ ಈಗಿನ ಕಾಲದ ಮ್ಲಾನ

ಮುಖಗಳನ್ನು ಮತ್ತು ಕೃಶ ಶರೀರಗಳನ್ನು ನೋಡಿದರೆ, ಮೇಲಿನ ಮಹಾತ್ಮರು ನಿಜವಾಗಿಯೇ ಇವರ ಪೂರ್ವಜರಿರಬಹುದೋ ಇಲ್ಲವೋ ಎಂಬದರ ಬಲವಾದ ಸಂದೇಹವು ಮನಸ್ಸಿನಲ್ಲಿ ನಡಹತ್ತುವದು. ಯಾವ ಆರ್ಯಾವರ್ತವು ಪ್ರಸಿದ್ಧವಾದ ಸುವರ್ಣಭೂಮಿಯೆಂದು ಕರೆಯಲ್ಪಡುತ್ತಿತ್ತೊ, ಅದೇ ದೇಶದಲ್ಲಿ ಈಗ ಸಾಧಾರಣ ಆರುಕೋಟಿ ಜನರು ಒಪ್ಪತ್ತೇ ಒಣ ಭಕ್ಕರಿಯನ್ನು ತಿಂದು ಕಾಲಕಳೆಯುವದನ್ನು ನೋಡಿದರೆ ಯಾರಿಗೆ ತಾನೇ ಲಜ್ಜೆಯುತ್ಪನ್ನವಾಗಲಿಕ್ಕಿಲ್ಲ.

ಈ ಯಾವತ್ತೂ ಪರಿಸ್ಥಿತಿಯ ತಳದಲ್ಲಿ ಏನೇ ಕಾರಣವಿದ್ದರೂ, ಮುಖ್ಯತಃ ತಮ್ಮ ತಮ್ಮ ವಿಷಯಕ್ಕೆ ತಮ್ಮ ತಮ್ಮಲ್ಲಿಯೇ ದಟ್ಟವಾದ ಅಜ್ಞಾನದ ಸಾಮ್ರಾಜ್ಯವು ಬಹಳೇ ಹಬ್ಬಿರುತ್ತದೆ. ಜನ-ಪುಢಾರಿಗಳು ತಮ್ಮ ಸಮಾಜದ ಕರ್ತವ್ಯಗಳನ್ನು ಮನಃಪೂರ್ವಕವಾಗಿ ಮಾಡಿ ತಮ್ಮ ಅಜ್ಞ ಬಂಧುಗಳ ಅಂತಃಕರುಣದ ಮೇಲೆ ಜ್ಞಾನತೇಜದ ಪ್ರಕಾಶವನ್ನು ಪಸರಿಸುವದು ಮುಖ್ಯ ಕರ್ತವ್ಯವಾಗಿದೆ. ಇರಲಿ.

ಹಳ್ಳಿಗಳ ಪುನರ್ಘಟನೆ ಎಂದರೇನೆಂಬುದನ್ನು ಮೊದಲು ವಿಚಾರಿಸುವಾ. ಯಾವ ರೀತಿಯಿಂದ ಮಂದಿರಕ್ಕೆ (ಇಮಾರತಿಗೆ) ಮೂಲ ತಳಗಟ್ಟಿನಿಂದ ಪ್ರಾರಂಭವಾಗುವದೋ, ಅದೇ ರೀತಿಯಲ್ಲಿ ರಾಷ್ಟ್ರ ಮಂದಿರದ ತಳಗಟ್ಟೆಂದರೆ ಹಳ್ಳಿಯು. ಇಮಾರತಿಯ ಚಿರಸ್ಥಾಯಿತ್ವವು ತಳವು ಎಷ್ಟು ಆಳವಾಗಿಯೂ ಗಟ್ಟಿಯಾಗಿಯೂ ಇರುವದೋ ಅದೇ ಪ್ರಮಾಣವನ್ನವಲಂಬಿಸಿರುವದು. ಇದೇ ರೀತಿಯಿಂದ ರಾಷ್ಟ್ರವು ಪ್ರಗತಿಯ ಶಿಖರವನ್ನು ಮುಟ್ಟಬೇಕಾದರೆ ಅದರ ಮೂಲ ತಳವಾದ ಹಳ್ಳಿಯನ್ನು ಸರ್ವಾಂಗಸುಂದರ ರೀತಿಯಿಂದ ಪರಿಪೋಷಣೆ ಮಾಡುವದು ಅತಿ ಮಹತ್ವದ್ದಾಗಿದೆ. ನಮ್ಮ ದೇಶದಲ್ಲಿ ೧೦೦ ಕ್ಕೆ ೮೦ ರಂತೆ ಒಕ್ಕಲತನದಿಂದ ಜೀವಿಸುವವರಂತೆ ಪಾಶ್ಚಾತ್ಯ ದೇಶಗಳಲ್ಲಿ ಆ ಜನರ ಜೀವನವು ಮುಖ್ಯತಃ ಕಾರಖಾನೆಗಳ ಮೇಲೆ ಅವಲಂಬಿಸಿರುತ್ತವೆ.

ಅವರು ಐಕ್ಯ ಮತ್ತು ಸಹಕಾರವನ್ನವಲಂಭಿಸಿ ಯಾವರೀತಿಯಿಂದ ತಮ್ಮ ಉನ್ನತಿಯನ್ನು ಮಾಡಿಕೊಂಡಿರುವರೆಂಬುದನ್ನು ನಾವು ಈಗ ನೋಡುತ್ತೀವೆ. ಅದರಂತೆ ನಾವಾದರೂ ಅದೇ ಸಾಧನವನ್ನು ಸ್ವೀಕಾರ ಮಾಡಿ ನಮ್ಮ ಸ್ಥಿತಿಯನ್ನು ಸುಧಾರಿಸುವದು ಇಷ್ಟವಾಗಿರುವದು. ಈಗ ನಾವು ಹಳ್ಳಿಗಳ ಪುನರ್ಘಟನೆಯನ್ನು ಮಾಡಲಿಕ್ಕೆ ಯಾವರೀತಿಯಲ್ಲಿ ಪ್ರಯತ್ನಿಸಬೇಕೆಂಬುದನ್ನು ಅತಿ ಸಂಕ್ಷಿಪ್ತ ರೀತಿಯಿಂದ ಕೆಳಗೆ ಬರೆಯಲ್ಪಟ್ಟಿದೆ.

ಈಗಿನ ಹಳ್ಳಿಗಳ ಪರಿಸ್ಥಿತಿಯು ಇಷ್ಟೊಂದು ನಿಕೃಷ್ಟಾವಸ್ಥೆಗೆ ಬರಲಿಕ್ಕೆ ಕಾರಣವೇನೆಂಬುದನ್ನು ವಿಚಾರಮಾಡಲಾಗಿ ಕಂಡುಬರುವ ಸಂಗತಿಯೆಂದರೆ, ಪೂರ್ವದಲ್ಲಿ ಹಳ್ಳಿಯು, ಯಾವಪ್ರಕಾರ ಸ್ವಯಂ ಸಿದ್ಧವಿದ್ದಿತೋ, ಅದರಂತೆ ಈಗ ನಮಗೆ ದೃಗ್ಗೋಚರವಾಗುವದಿಲ್ಲ. ಬದಲಾವಣೆಯು ಕಾಲಚಕ್ರದಿಂದ ಹೊಸ ಹೊಸ ಶೋಧಗಳೂ ಮತ್ತು ಯಾಂತ್ರಿಕ ಸುಧಾರಣೆಯೂ ಅಮಲಿನಲ್ಲಿ ಬಂದಕೂಡಲೇ ಅವುಗಳ ಜಗ್ಗಾಟದಲ್ಲಿ ಪೂರ್ವದ ದುಯ್ಯಂ ಹೋರಿಯು ಪಲಾಯನ ಹೇಳಿಸಿತು. ಇದನ್ನು ತುಂಬಿಕೊಡಲಿಕ್ಕೆ ಜನತೆ ಮತ್ತು ಸರಕಾರದವರು ಮಾಡತಕ್ಕ ಒಂದೆರಡು ಮಹತ್ವದ ಕೆಲಸಗಳ್ಯಾವವಂದರೆ ನಮ್ಮಲ್ಲಿಯ ಮೂಲ ಭಾಂಡವಲಿಗೆ ಸರಕಾರದ ಸಹಾಯ, ಉತ್ತೇಜನ ಮತ್ತು ಸಹಾನುಭೂತಿಗಳನ್ನು ಕೊಟ್ಟು ಈ ಯಾಂತ್ರಿಕ ಸುಧಾರಣೆಯ ಪ್ರಸಾರವನ್ನು ನಮ್ಮ ದೇಶದಲ್ಲಿ ಮಾಡಿಸಬೇಕು. 'Free Trade' ಅಥವಾ ಸ್ವತಂತ್ರವ್ಯಾಪಾರದ ತತ್ವವನ್ನು ಸದ್ಯಕ್ಕೆ ಬಂದುಮಾಡಿ ಈಗ ಆಗುತ್ತಿರುವ ಕಚ್ಚಾ ಮಾಲಿನ ನಿರ್ಗತವನ್ನು ನಿಲ್ಲಿಸಿ ಅದೇ ಮಾಲಿಸಿಂದ ನಮ್ಮ ದೇಶದಲ್ಲಿಯೇ ಪಕ್ಕಾಮಾಲನ್ನು ಹೊರಡಿಸಬೇಕು.

ಹಿಂದುಸ್ಥಾನ ದೇಶವು ಮುಖ್ಯವಾಗಿ ಒಕ್ಕಲತನವನ್ನವಲಂಬಿಸಿದ್ದರಿಂದ ಸರಕಾರದವರು ಜಮೀನುಗಳನ್ನು ಸುಧಾರಿಸುವ ಬಾಬಿ

ನಲ್ಲಿ ಒಕ್ಕಲಿಗರಿಗೆ ಯಾವತ್ತೂ ಪ್ರಕಾರದ ಮತ್ತು ಶಕ್ಯವಿದ್ದ ಎಲ್ಲ ಸಹಾಯವನ್ನೊದಗಿಸಿ ಕೊಡಬೇಕು. ಆ ಮೇಲೆ ದನಕರುಗಳ ಸುಧಾರಣೆಯಾಗಬೇಕು. ಅವುಗಳ ಮೇವಿಗಾಗಿ ಅಡವೀ ಖಾತೆಯ ಕೆಲವು ನಿಯಮಗಳನ್ನು ಸಡಿಲಿಸಬೇಕು.

ದರಿದ್ರತ್ವವು ಮಾನವನ ಅವನತಿಯ ಮೂಲವಾದ್ದರಿಂದ ಒಕ್ಕಲಿಗರನ್ನು ಅದರೊಳಗಿಂದ ಪಾರುಮಾಡಲಿಕ್ಕೆ ಅವರಿಗೆ ಆದಷ್ಟು ಕಡಿಮೆ ಬಡ್ಡಿಯಿಂದ ಹಣವನ್ನು ಪೂರೈಸಬೇಕು. ಸಹಾಕಾರೀ ಚಳವಳಿಯ ಪ್ರಸಾರವನ್ನು ಆದಷ್ಟು ಜೋರಿನಿಂದ ಮಾಡಿಸಿ ಅವೇ ತತ್ವದ ಮೇಲೆ ಖರೀದಿ ಮಾರಾಟ ಮಾಡುವ ಬಗ್ಗೆ ಜನರಿಗೆ ಸಹಕಾರೀ ಶಿಕ್ಷಣವನ್ನು ಕೊಡಬೇಕು

ಕಡೆಯಲ್ಲಿ, ಜನರ ಆರೋಗ್ಯ, ಶಿಕ್ಷಣ ಮತ್ತು ಶಾರೀರಿಕ ಉನ್ನತಿಯ ಕಡೆಗೆ ಸದ್ಯಕ್ಕಿಂತ ಹೆಚ್ಚಿಗೆ ಖರ್ಚುಮಾಡಿ ಹಳ್ಳಿಗಳ ಸ್ಥಿತಿಯನ್ನು ಸುಧಾರಿಸಬೇಕು.

## Need Of Home Industries.

## ೧೧. ಮನೆವಾರ್ತೆಯ ಹೋರೆಗಳ ಅವಶ್ಯಕತೆ.

ನಮ್ಮ ದೇಶದ ಒಕ್ಕಲಿಗರ ಸಾಂಪತ್ತಿಕ ಸ್ಥಿತಿಯನ್ನು ಹೇಗೆ ಸುಧಾರಿಸಬೇಕೆಂಬುವದೊಂದು ಅತಿ ಕಠಿಣವಾದ ಮಾತಾಗಿದೆ. ಹಳ್ಳಿಗಳಲ್ಲಿ ಕೆಲಸಮಾಡುವ ಒಕ್ಕಲಿಗರ ಪ್ರಮಾಣಕ್ಕಿಂತಲೂ ಹೊಲಗಳಲ್ಲಿ ಕೆಲಸಮಾಡುವವರ ಪ್ರಮಾಣವು ಬಹಳೇ ಹೆಚ್ಚಿರುವದು. ತೋಟದಲ್ಲಿ ದುಡಿಯುವವರಿಗೆ ಹನ್ನೆರಡು ತಿಂಗಳ ವರೆಗೂ ಕೆಲಸವಿರುವ ಮೂಲಕ ಅವರ ಬಗ್ಗೆ ವಿಚಾರಮಾಡುವದು ಅವಶ್ಯವಿರುವದಿಲ್ಲ. ಇನ್ನು, ಹೊಲಗಳಲ್ಲಿ ಕೆಲಸಮಾಡುವ ಜನರು ತಮ್ಮ ಕೆಲಸವಾಯಿತೆಂದರೆ ತೀರಿತು. ಹೆಚ್ಚುಳಿದ ವೇಳೆಯಲ್ಲಿ ಅವರು ಸುಮ್ಮನೆ ಮನೆಯಲ್ಲಿ ಕುಳಿತು ಕಾಲ

ಹರಣ ಮಾಡಬೇಕಾಗುತ್ತದೆ. ಈ ಪ್ರಸಂಗದಲ್ಲಿ ಅವರಿಗೆ ಯಾವ ಉದ್ಯೋಗಕ್ಕೆ ಹಚ್ಚಿದರೆ ಅವರಲ್ಲಿ ಹೆಚ್ಚಿನ ಸಂಪತ್ತಿನ ಸಮಾವೇಶವಾಗುವದೆಂಬದನ್ನು ವಿಚಾರಮಾಡಬೇಕಾಗಿದೆ. ತಮ್ಮ ಹೊಲದ ಕೆಲಸದ ಹೊರತು ಎರಡನೇ ಉದ್ಯೋಗ ಮಾಡುವದರ ಬಗ್ಗೆ ನಮ್ಮ ಒಕ್ಕಲಿಗರ ಪ್ರವೃತ್ತಿಯೇ ಇರುವದಿಲ್ಲ. ಅವರ ಮನಸ್ಸಿನಲ್ಲಿ ನಾಳಿನ ವಿಚಾರವು ಬಹುತೇಕ ಬರುವದಿಲ್ಲ. ಬಂದರೂ ಅದು ಬಹಳ ಸೂಕ್ಷ್ಮರೀತಿಯಿಂದ ಬರುತ್ತದೆ. ಅದು ಅತಿ ಸೌಮ್ಯರೂಪದ್ದಿರುವ ಕಾರಣ ಅವರ ಉಪಯೋಗವು ಬಹುಶಃ ಆಗುವದಿಲ್ಲ.

ಪೂರ್ವಕಾಲದಲ್ಲಿ ನಮ್ಮ ಹಿಂದುಸ್ಥಾನದೊಳಗೆ ಬೇಸಾಯದ ಉತ್ಪನ್ನವು ಹೆಚ್ಚಿಗೆ ಆಗುತ್ತಿದ್ದದರಿಂದ ಅದು ಜಗಜ್ಜನರಿಗೆಲ್ಲಾ ಪೂರೈಸಲ್ಪಡುತ್ತಿತ್ತು. ಆ ಕಾಲದ ಜನರು ಇತರ ಕೆಲಸಗಳನ್ನು ಮಾಡುತ್ತಿದ್ದರು. ತಮಗೆ ಅವಶ್ಯ ಬೀಳುವ ಯಾವತ್ತೂ ಸಾಮಾನುಗಳನ್ನು ಅಂದರೆ ರಂಟೆ, ಕುಂಟೆ ಮೊದಲಾದವುಗಳನ್ನು ಒಕ್ಕಲಿಗರು ತಾವೇ ಸ್ವತಃ ಮಾಡಿಕೊಳ್ಳುತ್ತಿದ್ದರು. ಪೂರ್ವದ ಕುಂಬಾರರು ಉತ್ತಮವಾದ ನಾನಾತರದ ಹರವಿ, ಕೊಡ ಮುಂತಾದವುಗಳನ್ನು ಮಾಡುತ್ತಿದ್ದರು. ಈಗಿನ ಆ ಕೆಲಸಗಾರರೆಂದರೆ ಗ್ಲಾಸಗೋ ಪಟ್ಟಣದಲ್ಲಿರುವವರೇ ಸರಿ. ಯಾವತ್ತೂ ಕೈಕಾರಿಕೆಯು, ಅಂದರೆ ಕುಂಬಾರ, ಬಡಿಗಾರ, ಕಮ್ಮಾರ, ಕಂಚುಗಾರ ಹೋರೆಗಳೆಲ್ಲವೂ ಪರದ್ವೀಪಸ್ಥರ ಸ್ವಾಧೀನವಾಗಿರುವವು. ಅಲ್ಲಿಂದ ತಯಾರಾಗಿ ಬರುವವರೆಗೂ ನಾವೆಲ್ಲರೂ ಅವರ ಮೋರೆಯ ಕಡೆಗೆ ನೋಡುತ್ತ ಕೂಡ್ರಬೇಕಾಗುವದು.

ಸನ್ ೧೯೧೮-೧೯ನೇ ಇಸ್ವಿಯಲ್ಲಿ ಉದ್ಯೋಗ ಧಂದೆಗಳ ವಿಚಾರಣೆಯಗೋಸುಗ ಒಂದು ಕಮೀಶನ್ ನೇಮಣೂಕ ಮಾಡಲ್ಪಟ್ಟಿದ್ದು ಅವರು ತಮ್ಮ ರಿಪೋರ್ಟನಲ್ಲಿ ಹಳೇ ಪದ್ಧತಿಗಳನ್ನವಲಂಬಿಸಿ ಹೊಸ ಪ್ರಕಾರದ ಉದ್ಯೋಗಗಳನ್ನು ಕೈಕೊಳ್ಳಲಿಕ್ಕೆ ಸೂಚಿಸಿರುತ್ತಾರೆ. ಮೊದ

ಲನೇ ಉದ್ಯೋಗವೆಂದರೆ ನೇಕಾರಿಕೆಯು. ಸದ್ಯಕ್ಕೆ ಐವತ್ತುಕೋಟಿ ರೂಪಾಯಿಗಳ ಬೆಲೆಬಾಳುವ ಅರಿವೆಯು ನಮ್ಮ ಹಿಂದುಸ್ಥಾನದಲ್ಲಿ ತಯಾರಿಸಲ್ಪಡುತ್ತಿದ್ದಾಗ್ಯೂ ಅದು ಸಾಕಾಗದೇ ಹೋಗುವದು. ಒಕ್ಕಲಿಗರೆಲ್ಲರು ತಮಗೆ ಬೇಕಾಗುವ ಅರಿವೆಗಳನ್ನು ತಾವೇ ತಯಾರಿಸಿದರೆ ಅದೊಂದು ರೀತಿಯಿಂದ ತಮ್ಮ ಆರ್ಥಿಕ ಸಂಪತ್ತನ್ನು ಹೆಚ್ಚುಮಾಡಿದಂತಾಗುವದಿಲ್ಲವೆ ? ಇದಲ್ಲದೆ ಅವರು ಬಡವರಿಗೂ, ಕಮ್ಮಾರರಿಗೂ ಹೆಚ್ಚಿಗೆ ಕೂಲಿಯನ್ನು ಕೊಡಬೇಕಾಗುತ್ತದೆ. ಬಡಿಗ, ಕಮ್ಮಾರತನ ವೆರಡೂ ಸಾಧಾರಣ ಪ್ರತಿಯ ಹೋರೆಗಳಿದ್ದು ಅವುಗಳನ್ನು ಒಕ್ಕಲಿಗರು ತಮ್ಮಷ್ಟಕ್ಕೆ ತಾವೇ ಮಾಡಿಕೊಳ್ಳಲಿಕ್ಕೆ ಕಲಿತರೆ, ಇದೂ ಸಂಪತ್ತನ್ನು ಹೆಚ್ಚಿಸಲನುಕೂಲವಾದ ರೀತಿಯಲ್ಲಿವೇ ?

ನಮ್ಮ ಸದ್ಯದ ಸ್ಥಿತಿಯೆಂದರೆ, ನಮಗೆ ಸಾಯಲಿಕ್ಕೆ ಬರುವದಿಲ್ಲೆಂದು ಜೀವಿಸಿರುವೆವು; ಮತ್ತು ಜೀವಿಸಲಾರೆವೆಂದು ಸಾಯುತ್ತಲಿರುವೆವು. ಹೊಟ್ಟೆತುಂಬ ತಿನ್ನಲಿಕ್ಕೆ ಸಿಗುವದಿಲ್ಲೆಂದು ಜನರ ಮುಖಗಳು ಕಪ್ಪೇರಿ ತೇಜೋವಿಹೀನವಾಗಿರುವವು. ಈ ಸ್ಥಿತಿಯನ್ನು ಬದಲು ಮಾಡಲಿಕ್ಕೇಬೇಕು. ಇದಕ್ಕೆ ಒಕ್ಕಲಿಗರ ಇಮ್ಮೈ ಹೋರೆಗಳು ಅತ್ಯಂತ ಅವಶ್ಯವಾಗಿರುವವು.

ಇಲ್ಲಿಯವರೆಗೆ ಹೇಳಿದವುಗಳೆಲ್ಲಾ ಓದುಬರಹ ವಿಲ್ಲದವರ ಹೋರೆಗಳು ಹಲಕೆಲವು ಶಿಕ್ಷಣದ ಬಲದಿಂದ ಮಾಡುವ ಉದ್ಯೋಗಗಳು ಮಹತ್ವದವಿರುವವು. ಅವುಗಳನ್ನು ಪ್ರಾರಂಭಿಸಲಿಕ್ಕೆ ರಸಾಯನ ಶಾಸ್ತ್ರ, ಇಂಜನಿಯರಿಂಗ ಮುಂತಾದ ಶಿಕ್ಷಣವನ್ನು ಹೊಂದಬೇಕಾಗುತ್ತದೆ. ಅದು ದೊರೆತ ಪಕ್ಷದಲ್ಲಿ ಲವ್ಹೆಂಡರ, ಕೋಲನ್ ವಾಟರ, ಬೂಟ ಪಾಲಿಶ್, ವೊದಲಾದವುಗಳನ್ನು ಮಾಡಲಿಕ್ಕೂ ಕಡ್ಡೀಪೆಟ್ಟಿಗೆಗಳನ್ನು ತಯಾರಿಸಲಿಕ್ಕೂ ಸಾಧ್ಯವಾಗುವದು. ಇದಲ್ಲದೆ ಗಾಳಿಯ ಮತ್ತು ಜಲೌಘದ ಶಕ್ತಿಯ ಸಹಾಯದಿಂದ ತಮಗೆ ಬೇಕಾಗುವ ಕೆಲಸಗಳನ್ನು ಮಾಡಿಕೊಳ್ಳಲು ಬರುವದು.

ಇವಲ್ಲದೆ ಕಲಾಕೌಶಲ್ಯದ ಕೆಲಸಗಳು ಬೇರೆ ಇರುವವು. ಕಾಗದಗಳ ಮಾಲೆ, ಹೂ, ಬೀಸಣಿಕೆ ಮುಂತಾದವುಗಳನ್ನು ಮನೆಯಲ್ಲಿ ಕುಳಿತಾಗ ಅನಾಯಾಸವಾಗಿ ಮಾಡಬಹುದು. ಪೂರ್ವದಿಕ್ಕಿನ ಇಂಗ್ಲಂಡವೆಂಬ ಅಭಿಮಾನದಿಂದ ಕರೆಯಲ್ಪಡುವ ನಾಮಾಂಕಿತವಾದ ಜಪಾನದ ರಾಷ್ಟ್ರವು ಇದೇ ತರದ ಉದ್ಯೋಗಗಳಿಂದ ಪ್ರಸಿದ್ಧಿಯನ್ನು ಪಡೆದಿರುತ್ತದೆಂದು ಬೇರೆ ಹೇಳಲು ಕಾರಣವಿಲ್ಲ. ಇದರಂತೆ ಪೇಪರ ಮಿಂಟ ತಯಾರಮಾಡುವ ಕೆಲಸವಾದರೂ ಸಹ ಹಗುರಾಗಿರುವದಲ್ಲದೆ ಅದನ್ನು ಮಾಡಲಿಕ್ಕೆ ಎಲ್ಲರಿಗೂ ಸಾಧ್ಯವಿರುವದು.

ಮೇಲೆ ವಿವರಿಸಿದ ಹೋರೆಗಳೆಲ್ಲಾ ಕ್ರಮದಿಂದ ಮಾಡತಕ್ಕವುಗಳಿರುತ್ತವೆ. ತಮ್ಮ ತಮ್ಮ ಹಳ್ಳಿಗಳ ಸ್ಥಿತಿಯನ್ನು ಚನ್ನಾಗಿ ಅಭ್ಯಾಸಿಸಿ ತದನುಸಾರ ಕೆಲಸಗಳ ಚುನಾವಣೆಯನ್ನು ಮಾಡಬೇಕು. ಯಾವತ್ತೂ ಜನರ ಹೃತ್ಕಮಲಗಳಲ್ಲಿ ಸಂಘಟನಾಶಕ್ತಿಯ ದಿವ್ಯಪ್ರಭಾವವನ್ನು ಬಲವಾಗಿ ಪ್ರೇರಿಸಿ, ಅದರಿಂದ ಹೊರಟ ಉಜ್ವಲವಾದ ತೇಜಸ್ಸಿನ ಬೆಳಕಿನಲ್ಲಿ ಎಲ್ಲರೂ ಒಟ್ಟುಗೂಡಿ ಕೆಲಸಮಾಡುವದು ರಾಷ್ಟ್ರೋದ್ಧಾರದ ತಳಹದಿಯಾಗಿರುತ್ತದೆ.

ಇವೆಲ್ಲವುಗಳ ವಿಚಾರಮಾಡಿ ಪ್ರತಿಯೊಂದು ಹಳ್ಳಿಯವರು ತಮಗೆ ಸಾಧ್ಯವೆನಿಸುವ ನಾನಾತರದ ಉದ್ಯೋಗಗಳನ್ನು ಕೈಕೊಳ್ಳುವರೆಂದು ತುಂಬಾ ಆಶೆಯಾಗಿದೆ.

## Subsidiary Industries for Agriculturists
## ೧೨. **ಬೇಸಾಯಿಗರ ಸಹಾಯಕ ಹೋರೆಗಳು**

ನಮ್ಮ ಕೃಷಿವಲಯಕ್ಕೆ ನೆರವಾಗುವ ಉದ್ಯೋಗಗಳಿಗೋಸ್ಕರವಾಗಿ ಇತ್ತಿತ್ತಲಾಗಿ ನಮ್ಮ ದೇಶದಲ್ಲಿ ಬಹಳೇ ಮಹತ್ವವಾದ ವಿಚಾರ ಕ್ರಾಂತಿಗಳಾಗಹತ್ತಿವೆ. ಇದು ನಮ್ಮ ಜನರ ಸುದೈವವೆಂದೇ ಹೇಳ

ಬಹುದು. ಒಕ್ಕಲಿಗರಿಗೆ ತಮ್ಮ ಉದ್ಯೋಗವನ್ನು ನೀಗಿಸಿಕೊಂಡು ವೇಳೆಯು ಉಳಿತಾಯವಾಗುವದೋ ಹೇಗೆಂಬುದನ್ನು ಮೊದಲು ನೋಡಬೇಕಾಗುವದು. ಪರಮೇಶ್ವರನು ನಿರ್ಮಿಸಿದ ಪ್ರತಿಯೊಂದು ಹಗಲು-ರಾತ್ರಿಗಳು ಹನ್ನೆರಡುತಾಸಿನವಿರುವವೆಂಬುದು ಎಲ್ಲರಿಗೂ ಗೊತ್ತಿದ್ದಮಾತು. ಈ ಇಪ್ಪತ್ತುನಾಲ್ಕು ತಾಸುಗಳಲ್ಲಿ, ನಿದ್ರೆಯಲ್ಲಿ ಕಳೆಯುವ ಎಂಟುತಾಸುಗಳು ಹೋಗಲಿ. ಮತ್ತುಳಿದ ಅರ್ಧ ವೇಳೆಯಲ್ಲಿ ಅಂದರೆ ಎಂಟುತಾಸುಗಳಲ್ಲಿ, ದಿನಗೆಲಸಗಳಾದ ಊಟ-ಉಡಿಗೆ ಮುಂತಾದವುಗಳನ್ನು ನೆರವೇರಿಸಿಕೊಳ್ಳಲಿ. ಆದರೆ ದಿನಾಲು ಎಂಟು ತಾಸುಗಳಂತೆ ಹೊಲದಲ್ಲಿ ದುಡಿಯುವವನು ಎಂದಿಗೂ ಧನಹೀನನಾಗಿ ಸಾಲಗೋಯ್ಕನಾಗನೆಂಬ ಸಂಗತಿಯನ್ನು ಮನದಲ್ಲಿ ನೋಡಿರಿ.— ಹೊಲಕ್ಕೆ ಹೋಗಿ, ಎತ್ತುಗಳನ್ನು ಬಿಚ್ಚಿ, ಅವಕ್ಕೆ ಮೇವು ಮಿಡಚಿಗಗಳ್ನು ಹಾಕಲಿಕ್ಕೆ ಇಡೀ ದಿವಸ ಎಂಟು ತಾಸುಗಳು ಬೇಕಾಗುವದಿಲ್ಲ. ಯಾರಿಗೆ ಓದುಬರಹ ಬರುತ್ತದೆಯೋ ಅವರು ದಿನಾಲು ತಾವು ಕೆಲಸ ಮಾಡಿದ ವೇಳೆಯನ್ನು ಸಮೂದಿಸುತ್ತಿದ್ದರೆ ತಮ್ಮ ಎಷ್ಟು ವೇಳೆಯು ನಿರರ್ಥಕ ಹೋಗುವದೆಂಬುದು ಕಂಡುಬರುವದು.

ಎರಡನೇ ಮಾತೆಂದರೆ, ಒಕ್ಕಲಿಗನಿಗೆ ಹನ್ನೆರಡು ತಿಂಗಳೂ, ದಿನಾಲು ೮ ತಾಸುಗಳಂತೆ ದುಡಿಯುವಷ್ಟು ಕೆಲಸವಿರುವದಿಲ್ಲೆಂಬುದು ಸರ್ವಸಮ್ಮತವು. ಆದರೂ ಹಲಕೆಲವರು ಹನ್ನೆರಡು ತಿಂಗಳವರೆಗೂ ಕೆಲಸವಿರುವದೆಂಬ ಒಡಿವಾರ ಒಡೆಯುವರು. ಈ ಬಾಯಿಮಾತಿನ ಜನರನ್ನು ದಿನಾಲು ಎಂಟುತಾಸುಗಳಂತೆ ಕೆಲಸಕ್ಕೆ ಹಚ್ಚಿದರೆ ಸೂತ್ರ ಏನೆಂಬುದು ತಾನೇ ಗೊತ್ತಾಗುವದು.

ಹೆಚ್ಚುಳಿದ ವೇಳೆಯಲ್ಲಿ ಒಕ್ಕಲಿಗನು ಯಾವ ಉದ್ಯೋಗವನ್ನು ಕೈಕೊಳ್ಳಬೇಕೆಂಬ ಮಾತು ನಮ್ಮೆದುರಿನಲ್ಲಿರುವದು. ಸಹಾಯಕ ಉದ್ಯೋಗಗಳಿಂದ ಅಷ್ಟೇನೂ ಹೊಟ್ಟೆ ತುಂಬಿಕೊಳ್ಳುವಷ್ಟು ಪ್ರಾಪ್ತಿ

ಯಾಗುವದಿಲ್ಲೆಂಬುದು ನಿಜವು. ಸಹಾಯಕ ಹೋರೆಯು ಹೊಟ್ಟೆ ಗೋಸ್ಕರವಲ್ಲ. ಪ್ರಾಮುಖ್ಯವಾಗಿ ಒಕ್ಕಲತನವೇ ಹೊಟ್ಟೆಯದು. ಸಹಾಯಕ ಹೋರೆಯಿಂದ ಹೊಟ್ಟೆಯ ಚಿಂತೆಯು ದೂರಾದ ಮಾತ್ರಕ್ಕೆ ಅವೇ ಮುಖ್ಯ ಹೋರೆಯಾಗುವದು. ನಿರುದ್ಯೋಗದಲ್ಲಿಯೂ ಆಲಶ್ಯದಲ್ಲಿಯೂ ಕಾಲಕಳೆಯದೆ, ಏನೋ ದಿನಾಲೂ ಒಂದೇ ದುಡ್ಡು ಪ್ರಾಪ್ತಿಯಾಗವಲ್ಲದೇಕೆ ಸಂಸಾರಕ್ಕೆ ಅನುಕೂಲವಾದೀತೆಂದು ಸಹಾಯಕ ಹೋರೆಗಳನ್ನು ಕೈಕೊಳ್ಳಬೇಕು.

ಸಹಾಯಕ ಹೋರೆಗಳನ್ನು ಆರಂಭಿಸಲಿಕ್ಕೆ ಜ್ಞಾನವು ಅವಶ್ಯವೆಂತಲೂ, ಜ್ಞಾನಕ್ಕೆ ಅಭ್ಯಾಸ ಬೇಕೆಂತಲೂ, ಕೆಲವು ಜನರ ಆಕ್ಷೇಪವದೆ "ಅಭ್ಯಾಸವಿಲ್ಲದೆ ಜ್ಞಾನವಿಲ್ಲ" ಈ ಬಗೆಯ ಬಂಡೀಗಾಲಿಯ ಚಕ್ರವು ಅವರ ತಲೆಯಲ್ಲಿ ತಿರುಗಹತ್ತಿ, ಅವರ ಮೆದುಳನ್ನು ಅಗಳಾಡಿಸಿ ಬಿಡುತ್ತದೆ. ಈ ಚಕ್ರದ ವೇಗದ ತಿರುವಿಕೆಯೊಳಗಿಂದ ಪಾರುಗಾಣಲು ಅವರು ಅಭ್ಯಾಸ ಅಂದರೆ ಕಾರ್ಯಕ್ಕೆ ಪ್ರವೃತ್ತರಾಗಬೇಕಲ್ಲದೆ ಎರಡನೇ ಮಾರ್ಗವೇ ಇಲ್ಲ.

ವಿಶೇಷ ಭಾಂಡವಲವೂ ಜ್ಞಾನವೂ ಬೇಕಾಗದೆ ಸಹಜ ಸುಲಭವೆನಿಸುವ ಮತ್ತು ಪರಿಣಾಮದಲ್ಲಿ ಸುಖವನ್ನೀಯುವ ಒಂದೆರಡು ಸಹಾಯಕ ಹೋರೆಗಳನ್ನು ವಿಸ್ತರಿಸಿ ವಿಶ್ರಮಿಸುವೆವು. ಮೊದಲನೇ ಹೊರೆಯೆಂದರೆ, ದನಗಳ ಸಂಗೋಪನೆಯು ಮೇಲ್ತರಗತಿಯ ಆಕಳುಗಳನ್ನು ಸಾಕಿದರೆ ಒಕ್ಕಲಿಗನಿಗೆ ಮೇಲ್ತರಗತಿಯ ಎತ್ತುಗಳು ದೊರೆಯುವದರಲ್ಲಿ ಸಂಶಯವಿಲ್ಲ ಉತ್ಕೃಷ್ಟವಾದ ಎತ್ತುಗಳಿಗೆ ಪೇಟೆಯಲ್ಲಿ ಉತ್ಕೃಷ್ಟ ಬೆಲೆ ಬರುವದು. ಹೆಚ್ಚಾದ ಎತ್ತುಗಳನ್ನೂ ಆಕಳುಗಳನ್ನೂ ಅವನು ವಿಕ್ರಯಿಸಬಹುದು. ಆಕಳುಗಳನ್ನು ಸಾಕುವದರಿಂದ ಮನೆಯಲ್ಲಿರುವ ಯಾವತ್ತರಿಗೂ ಹಾಲು ಮಸರಿನ ಕೊರತೆ ಇಲ್ಲದಂತಾಗಿ ಕುಟುಂಬವು ಸಶಕ್ತವಾಗಿಯೂ, ತೇಜಸ್ವಿಯಾಗಿಯೂ, ದೀರ್ಘಾಯು

ವಾಗಿಯೂ ಬಾಳುವದು. ದನಗಳ ಸಂಗೋಪನದಿಂದ ಒಕ್ಕಲಿಗನಿಗೆ ಮಹತ್ವವಾದ ಗೊಬ್ಬರವು ಪುರವತೆಯಾಗುವದು. ಹಾಲು ಮೊಸರು ಮಾರಲಿಕ್ಕೆ ಎಮ್ಮೆಗಳನ್ನು ಸಾಕಬೇಕು. ಇದರಿಂದ ಸಂಸಾರಕ್ಕೆ ಬಹು ಸಹಾಯವಾಗುವದು. ಇದಕ್ಕೆ ಅಭ್ಯಾಸದ ಅವಶ್ಯಕತೆಯೇನೂ ಬೇಕಾಗಿಲ್ಲ. ಎಲ್ಲರಿಗೂ ಸುಲಭ ಸಾಧ್ಯವಾದ ಕೆಲಸವಾಗಿರುತ್ತದೆ. ಇತ್ತಿತ್ತಲಾಗಿ ಶಹರಗಳಲ್ಲಿ ಹಾಲು ಬೆಣ್ಣೆಯ ಅಪಚಣೆಯು ಬಹಳವಾಗಿರುತ್ತದೆಂಬ ಸಂಗತಿಯು ಫರಾಳದ ಅಂಗಡಿಗಳ ಬೆಳವಣಿಗೆಗಳ ಮೇಲಿಂದ ಕಂಡುಬರಹತ್ತಿದೆ. ಇದರ ಮೇಲಿಂದ ನೋಡಲಾಗಿ, ಹೈನವು ಒಕ್ಕಲಿಗನ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಲು ನೆರವಾಗುವದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂಬದು ನಮ್ಮದೊಂದು ಅಭಿಪ್ರಾಯವು.

ಎರಡನೇ ಕೆಲಸವೆಂದರೆ ಮನೆಯಲ್ಲಿ ನೂಲು ತೆಗೆಯುವದು ಮತ್ತು ನೇಯುವದು, ಹೊಟ್ಟೆತುಂಬಿದ ಮೇಲೆ ಮಾನವನಿಗೆ ಬಟ್ಟೆಯ ಅವಶ್ಯಕತೆಯುಂಟಾಗುವದು. ಅರಸನಿಂದ ಮೊದಲ್ಗೊಂಡು ಅತಿ ನಿಕೃಷ್ಟಸ್ಥಿತಿಯ ಭಿಕ್ಷುಕನವರೆಗೂ-ಅಂದರೆ ಯಾವತ್ತೂ ಪರಿಸ್ಥಿತಿಯ ಎಲ್ಲ ಜನರಿಗೂ ಹೆಚ್ಚುಕಡಿಮೆಪ್ರಮಾಣದಿಂದ ವಸ್ತ್ರಗಳು ಬೇಕೇಬೇಕು ಇಷ್ಟೊಂದು ವಸ್ತ್ರದ ಮಹತ್ವವಿರುವದು. ಒಕ್ಕಲಿಗರೆಲ್ಲರೂ ಬರೀ ವಸ್ತ್ರಗಳನ್ನೇ ನೇಯಬೇಕೆಂದು ಹೇಳುವದಿಲ್ಲ. ಗ್ರಾಮದಲ್ಲಿಯ ೮-೧೦ ಕುಟುಂಬಗಳು ವಸ್ತ್ರ ತಯಾರಿಸುವ ಹೋರೆಯನ್ನು ಮಾಡಬೇಕು. ಇವೇ ಕುಟುಂಬಕ್ಕೆ ಮಾತ್ರ ಇದು ಮುಖ್ಯ ಹೋರೆಯಾಗಬಹುದು. ಉಳಿದವರೆಲ್ಲರೂ ಅವರಿಗೆ ಮಾಲನ್ನು ಪೂರೈಸಿಕೊಡಬೇಕಲ್ಲದೆ ತಮಗೆ ಬೇಕಾಗುವಂಥ ಅರಿವೆಗಳನ್ನು ಅವರಿಂದ ತಯಾರಿಸಿಕೊಳ್ಳಬೇಕು. ಮನೆಯಲ್ಲಿಯೇ ಹತ್ತಿಯನ್ನು ವಿಂಗಡಿಸಿ, ಬೀಜಗಳನ್ನು ಬೇರ್ಪಡಿಸಿ ನೂಲು ತೆಗೆದುಕೊಟ್ಟು ವಸ್ತ್ರಗಳನ್ನು ಸಿದ್ಧಪಡಿಸಿಕೊಳ್ಳುವದು ಎರಡನೇ ಸಹಾಯಕ ಹೋರೆಯು.

ಮೇಲ್ಕಂಡ ಎರಡೂ ಒಗೆಯ ಹೋರೆಗಳು ಒಕ್ಕಲಿಗರಿಗೆ ವಿಶೇಷವಾದ ಭಾಂಡವಲಿನ ಹೊರತು ಕೈಕೊಳ್ಳಲು ಶಕ್ಯವಿರುವವು. ಅವರು ಆ ಹೋರೆಗಳಿಂದ ಧನಿಕರಾಗದಿದ್ದರೂ ಅವರ ದೈನ್ಯಾವಸ್ಥೆಯು ೮-೧೦ ವರುಷಗಳಲ್ಲಿ ಹಿಂದೆಗೆಯಬಹುದೆಂದು ಸಾರಿಹೇಳಬಹುದು.

## Co-operation and the Improvement of Agriculture
## ೧೩. ಸಹಕಾರೀ ಚಳವಳಿಯೂ ಒಕ್ಕಲತನದ ಸುಧಾರಣೆಯೂ

ರೈತರನ್ನು ಸಾಲಗೂಳಿತನದಿಂದ ಮುಕ್ತಮಾಡುವದಕ್ಕೋಸ್ಕರ ಸಹಕಾರೀ ಚಳವಳಿಯ ಉತ್ಪತ್ತಿಯಾಗಿದ್ದು ಇದರ ಉಪಯುಕ್ತವಾದ ನಾನಾತರದ ಸ್ವರೂಪವು ಒಂದುಸಾರೆ ಲಕ್ಷ್ಯದಲ್ಲಿ ಬಿಂಬಿಸಿದ ನಂತರ ಈ ಚಳವಳಿಯ ಉಪಯೋಗವು ತೀವ್ರವಾಗಿ ಎಲ್ಲಕಡೆಯಲ್ಲಿ ಪಸರಿಸಿತು. ಹಿಂದುಸ್ಥಾನದಲ್ಲಿ ಸಹಕಾರೀ ಚಳವಳಿಯ ಪ್ರಾಥಮಿಕ ಸ್ವರೂಪವು, ಈ ಮೊದಲು, ಬೇರೆ ಸಹಕಾರೀ ಪತ್ತಿನ ಸಂಘಗಳ ಸಲುವಾಗಿಯೇ ಇದ್ದಹಾಗೆ ತೋರುತ್ತಿತ್ತು. .ಸಾಹುಕಾರರು ತೆಗೆದುಕೊಳ್ಳುವ ಹೆಚ್ಚಿನ ದರದ ಬಡ್ಡಿಯಸಲುವಾಗಿಯೂ ಮತ್ತು ಎರಡನೇ ಕಾರಣಗಳಿಂದಲೂ ಸಾಲದಲ್ಲಿ ಮುಳುಗುತ್ತ ನಡೆದಂತಹ ಒಕ್ಕಲಿಗರ ವರ್ಗಕ್ಕೆ ಸುಸ್ಥಿತಿಯನ್ನುಂಟು ಮಾಡಲಿಕ್ಕೂ ಪ್ರಾಮಾಣಿಕತನದಿಂದ ವ್ಯವಹಾರ ಮಾಡಲಿಕ್ಕೂ ನಿಯಮಿತತನದಿಂದ ಸಾಲಕೊಡಲಿಕ್ಕೂ ಸಂಘಗಳ ಅವಶ್ಯಕತೆ ಇತ್ತು. ಇಂತಹ ಸಂಘಗಳ ಉಪಯೋಗವು ಎಷ್ಟರಮಟ್ಟಿಗೆ ಆಗಿರುತ್ತದೆಂಬುದು ಸದ್ಯದ ಹಳ್ಳಿಗಳಲ್ಲಿ ಕಂಡುಬರುವ ಸಂಘಗಳಿಂದ ಕಂಡುಬರುತ್ತದಲ್ಲದೆ ಅವುಗಳ ಬೆಳವಣಿಗೆಯ ಮೇಲಿಂದಲೂ ಅವುಗಳ ಮಹತ್ವವು ಕಂಡುಬರುತ್ತಿದೆ. ಆದರೂ ಸಹಕಾರೀ ಚಳವಳಿಯು ಸಾಕಷ್ಟು ಬೆಳೆಯಲಿಕ್ಕೆ ಇನ್ನೂ ಬಹಳೇ ಅವಕಾಶವಿರುತ್ತದೆ. ಈ ಚಳವಳಿಯಲ್ಲಿ ಸದ್ಯಕ್ಕೆ ೧೦೦ಕ್ಕೆ ೧೦ರಂತೆಮಾತ್ರ ಒಕ್ಕಲತನದ ಜನರಿರುವದು ಕಂಡುಬರುತ್ತದೆ. ಉಳಿದ ಒಕ್ಕಲಿಗರಿಗೆ

ಸಹಕಾರೀ ಚಳವಳಿಯಲ್ಲಿ ಸೇರ್ಪಡೆಯಾಗುವಂತೆ ಮಾಡಿ ಸಂಘಗಳ ಉಪಯುಕ್ತತೆಯನ್ನು ಮಾಡಿಕೊಳ್ಳಲಿಕ್ಕೆ ತಿಳಿಸಿಕೊಡುವ ಭಾಗವು ಇನ್ನೂ ಸಹಕಾರಿಗಳ ಮೇಲೆ ಇರುತ್ತವೆ.

ಸಹಕಾರೀ ಸಂಘಗಳ ಬೆಳವಣಿಗೆಯಾಗುತ್ತ ನಡೆದಂತೆ ಸದರೀ ಚಳವಳಿಯನ್ನು ಬೇರೆ ಬೇರೆ ಕೆಲಸಗಳಲ್ಲಿ ಉಪಯೋಗಮಾಡಿಕೊಳ್ಳುವ, ಪ್ರವೃತ್ತಿಯಾದರೂ ಹೆಚ್ಚುತ್ತಲಿರುವದು. ಈ ಕೆಲಸವನ್ನು ಸರಕಾರಿ ಮತ್ತು ಬಿನ್ ಸರಕಾರಿ ಸಹಕಾರಿಗಳು ಉತ್ಕೃಷ್ಟ ರೀತಿಯಿಂದ ಮಾಡುತ್ತಲಿರುವರು. ಈಗ ಈ ಚಳಿವಳಿಯ ಉಪಯೋಗವು ವ್ಯಾಪಾರ, ತಾರಣವಿದ್ದ ಜಮೀನ ಬಿಡಿಸಿಕೊಳ್ಳುವದು, ಪಡುಭೂಮಿಯನ್ನು ಸಾಗುಮಾಡುವದು, ಉತ್ತಮ ಪ್ರಗತಿ ಬೀಜಗಳನ್ನು ದೊರಕಿಸಿಕೊಳ್ಳುವದು, ಮನೆ ಕಟ್ಟುವದು, ದನಗಳ ಆರೈಕೆಯನ್ನು ಮಾಡುವದು, ದನಗಳ ವಿಮಾ ಇಳಿಸುವದು, ಹಾಲು ಪೂರೈಸುವದು ಮುಂತಾದ ಅನೇಕ ವಿಷಯಗಳಲ್ಲಿ ಮಾಡಿಕೊಳ್ಳಲಿಕ್ಕೆ ಬರುತ್ತದಲ್ಲದೆ ಪ್ರತಿಯೊಂದು ವಿಷಯದ ಸಲುವಾಗಿ ಸಹಕಾರೀ ಸಂಘಗಳು ಸ್ಥಾಪಿಸಲ್ಪಟ್ಟಿರುತ್ತವೆ.

ಬಹುತೇಕ ಸಂಘಗಳು ಮಾಲು ಖರೀದಿ ಮತ್ತು ಮಾರಾಟ ಮಾಡುವಂಥವುಗಳಾಗಿರುತ್ತವೆ. ಉತ್ಪಾದಕ ಸ್ವರೂಪದಿಂದ ಕೆಲಸ ಮಾಡುವ ಸಂಘಗಳು ಕಡಿಮೆ ಇರುತ್ತವೆ. ಬಂಗಾಲದಲ್ಲಿ ಉತ್ಪಾದಕ ಸಂಘಗಳ ಬೆಳವಣಿಗೆಯು ಬಹಳೇ ಆಗಿರುತ್ತದೆ. ಇವುಗಳಲ್ಲಿ ಬಹುತರವಾಗಿ ಇರಿಗೇಶನ್ ಅಂದರೆ ನೀರುಪೂರೈಸುವ ಸಂಘಗಳಿರುತ್ತವೆ. ಬಂಗಾಲದಲ್ಲಿಯ ಈ ಪ್ರಕಾರದ ಸಂಘಗಳ ಸಂಬಂಧವಾಗಿ ವಿಶೇಷವಾಗಿ ಲಕ್ಷದಲ್ಲಿಡತಕ್ಕ ಸಂಘವೆಂದರೆ, ನಾಗಾಂವ ಗಂಜ ಕಲ್ಟಿವೇಟರ್ಸ ಕೊ. ಸೊಸಾಯಟಿಯು ಅತಿವೃಷ್ಟಿಯಿಂದ ಹಾನಿಯಾದಂಥ

ಒಕ್ಕಲಿಗರಿಗೆ ೨,೬೩,೬೦೬ ರೂಪಾಯಿಗಳನ್ನು ಬಡ್ಡಿಯಿಲ್ಲದೆ ಸಾಲ ವಾಗಿ ಕೊಟ್ಟಿತು. ಇದರ ಮೇಲಿಂದ ಸಹಕಾರೀ ಸಂಘಟನೆಯನ್ನು ಪ್ರಸಂಗದಲ್ಲಿ ಹೇಗೆ ಉಪಯೋಗ ಮಾಡಿಕೊಳ್ಳಬೇಕೆಂಬುವದೂ ಮತ್ತು ತಮ್ಮ ತಮ್ಮ ಜನರನ್ನು ಅಕಸ್ಮಾತ್ತಾಗಿ ಒದಗಿದ ಸಂಕಟದಿಂದ ಹೇಗೆ ಮುಕ್ತರನ್ನಾಗಿ ಮಾಡಬೇಕೆಂಬುದೂ ಸ್ಪಷ್ಟವಾಗಿ ಕಂಡುಬರುತ್ತದೆ. ಪಂಜಾಬದಲ್ಲಿ ಸಹಕಾರಿ ಸಂಘಗಳು ೧೬೫೦ ಎಕರೆ ಪಡಭೂಮಿಯನ್ನು ಸಾಗುವಳಿ ಮಾಡಲಿಕ್ಕೆ ಹತ್ತಿರುತ್ತವೆ. ಮಧ್ಯಪ್ರಾಂತದಲ್ಲಿ ಸುಧಾರಿಸಿದ ಪದ್ಧತಿಯ ಮೇರೆಗೆ ಗಳೇದ ಸಾಮಾನುಗಳನ್ನು ಇಟ್ಟು ಅವುಗಳನ್ನು ಮೆಂಬರ ಜನರಿಗೆ ಕೊಡುವದರಲ್ಲಿ ಬರುವದು. ಬಿಹಾರ ಒಡಿಸಾದ ಸೆಂಟ್ರಲ್ ಬ್ಯಾಂಕಿನವರು ಒಕ್ಕಲಿಗರಿಗೆ ೧೧೦೦೦ ರೂಪಾಯಿಗಳನ್ನು ಭಾವೀ ತೋಡಲಿಕ್ಕೆ ಮತ್ತು ೯೦೦೦ರೂ. ಗಳನ್ನು ಪಡಭೂಮಿಯ ಸಾಗುವಳಿಮಾಡಲಿಕ್ಕೆ ಕೊಟ್ಟಿರುವರು. ಹಾಲು ಪೂರೈಸುವ ಸಂಘಗಳ ವಿಷಯದಲ್ಲಿ ಬೇರೆ ಬೇರೆ ಸಂಘಗಳ ಅನುಭವವು ಬೇರೆ ಬೇರೆಯಾಗುತ್ತದೆ.

ಈ ಯಾವತ್ತೂ ಸಂಘಗಳ ಮೇಲಿಂದ ಸಹಕಾರಿತೆಯ ಪ್ರತ್ಯಕ್ಷ ಉಪಯೋಗವು ಬೇರೆ ಬೇರೆ ತರದ ವ್ಯವಸಾಯಗಳಲ್ಲಿ ಹೇಗೆ ಆಗುತ್ತ ನಡೆದಿರುವದೆಂಬ ಸಂಗತಿಯು ಕಂಡುಬರುತ್ತದೆ. ಮನುಷ್ಯನಿಗೆ ತನ್ನ ಅಲ್ಪಸ್ವಲ್ಪ ಸ್ವಾರ್ಥವನ್ನು ಸಹ ಸಾಧಿಸಿಕೊಂಡು ಸರಿಯಾದ ಜವಾಬುದಾರಿಯನ್ನು ವಹಿಸಿ ಸಹಕಾರಿತೆಯ ಮುಖಾಂತರ ಒಂದು ದೊಡ್ಡ ಉದ್ಯೋಗವನ್ನು ಉತ್ತಮರೀತಿಯಿಂದ ಸಾಗಿಸಲಿಕ್ಕೆ ಶಕ್ಯವಿರುತ್ತದೆಂದು ಹೇಳಬಹುದು.

ಸಹಕಾರೀ ಚಳವಳಿಯ ಬೆಳವಣಿಗೆಗೆ ಕೆಲವು ಅಡಚಣಿಗಳಿರುತ್ತವೆ. ಅಂತಃಕರುಣ ಪೂರ್ವಕವಾಗಿ ಸಹಕಾರಿತ್ವವು ಇದ್ದ ಹೊರತು ದುಡ್ಡಿನ ವ್ಯವಹಾರವು ಸರಳವಾದ ಮಾರ್ಗದಿಂದ ನಡೆಯಲಾರದು

ಮೇಲಿಂದ ಮೇಲೆ ಸಂಘಗಳು ಅಡಗುವ ಸುದ್ದಿಯನ್ನು ಕೇಳುತ್ತೇವೆ. ಇದಕ್ಕೆ ವ್ಯವಸ್ಥಾಪಕರ ದುರ್ಲಕ್ಷವೂ ಮೆಂಬರ ಜನರ ಅಜ್ಞಾನ ಮತ್ತು ಆಲಸ್ಯವೂ ಕಾರಣವಾಗುತ್ತವೆ.

ಸಹಕಾರೀ ಚಳವಳಿಯ ಉಪಯುಕ್ತತೆಯನ್ನು ಲಕ್ಷದಲ್ಲಿಟ್ಟು ಕೊಂಡು, ಯಾವತ್ತೂ ಜನರು ಅದರಲ್ಲಿ ಮನಸ್ಸು ಹಾಕಿ ಅದರಿಂದ ಒಕ್ಕಲಿಗರಿಗೆ ಲಾಭಮಾಡಿಕೊಡುವದು ಅವಶ್ಯವಾಗಿರುತ್ತದೆ. ಅದರ ವಿಸ್ತಾರವನ್ನು ಪರಿಹರಿಸುವದಕ್ಕಾಗಿ ಸರಕಾರದ ಮುಖಾಂತರ ಎಷ್ಟೇ ಹೋರಾಡಿದರೂ ಅದು ಜನರ ಸಹಾಯದ ಹೊರ್ತು ಫಲಪ್ರದವಾಗು ವದಿಲ್ಲ. ಭೂಮಿಯನ್ನು ಉತ್ತಮರೀತಿಯಿಂದ ಸಾಗುವಳಿ ಮಾಡಿ, ಉತ್ಪನ್ನವನ್ನು ಹೆಚ್ಚಿಸುವದು ಅತ್ಯಂತ ಅಗತ್ಯವಿರುತ್ತದೆ. ಉತ್ತಮ ಪ್ರತಿಯ ಬೀಜಗಳನ್ನು ಬಿತ್ತಿ ನಾನಾತರಹದ ಸುಧಾರಿಸಿದ ಆಯುಧ ಗಳ ಸಹಾಯದಿಂದಲೇ ಈ ಕೆಲಸವು ಶಕ್ಯವಿರುತ್ತದೆ. ಸಹಕಾರಿಗಳು ಸಹಕಾರೀ ಖಾತೆಯವರಿಂದ ಜಮೀನ ಸುಧಾರಣೆಯ ಸಲುವಾಗಿ ಮುದ್ದತೀ ಸಾಲಗಳನ್ನು ಕೊಡಿಸುವದು ಅವಶ್ಯವಿರುತ್ತದೆ. ಒಕ್ಕಲಿಗ ರಿಗೆ ಇದರ ಯೋಗ್ಯಲಾಭವನ್ನು ದೊರಕಿಸಿಕೊಡುವ ಭಾಗವು ಕಳಕಳಿ ಯಿಂದ ಕೆಲಸಮಾಡುವ ಸುಶಿಕ್ಷಿತ ಜನರ ಕಡೆಗೆ ಇರುತ್ತದೆ.

## Co-operative Movement and Money Market

## ೧೪. ಸಹಕಾರೀ ಚಳವಳಿಯೂ ಹಣದ ವ್ಯವಹಾರವೂ

ಸಹಕಾರಕ್ಕೂ ಹಣದ ವ್ಯವಹಾರಕ್ಕೂ ಯಾವರೀತಿಯಿಂದ ನಿಕಟ ಸಂಬಂಧವಿರುವದೆಂಬದನ್ನು ಕುರಿತು ಸ್ವಲ್ಪದರಲ್ಲಿ ವಿವರಿಸು ವೆವು. ಹತ್ತಿಯ ವ್ಯವಹಾರವನ್ನೂ, ಅರವಿಯ ವ್ಯವಹಾರವನ್ನೂ, ಕಾಳುಕಡಿಯ ವ್ಯವಹಾರವನ್ನೂ, ಇನ್ನೂ ಅದೇಪ್ರಕಾರದ ಎಷ್ಟೋ ವ್ಯವಹಾರಗಳನ್ನು ಪ್ರತಿ ದಿನದಲ್ಲಿ ನಾವು ಕೇಳುತ್ತಲಿದ್ದರೂ ಹಣದ

ವ್ಯವಹಾರದ ಬಗ್ಗೆ ಮಾತ್ರ ಅಲಕ್ಷ್ಯ ಮಾಡುತ್ತಿರುವೆವು. ಆದರೆ ಇಂತಹ ವ್ಯವಹಾರವು (Money marketing) ಈ ಜಗತ್ತಿನಲ್ಲಿಯ ಎಲ್ಲ ದೇಶಗಳಲ್ಲಿಯೂ ಆಗುತ್ತಲಿದ್ದು ಅದರ ಅಂದೋಲನವು ಅತಿ ದೊಡ್ಡ ಪ್ರಮಾಣದಿಂದ ಸಾಗುತ್ತಲಿರುವದು. ಊರೂರಿಗೆ ಯಾವ ಪ್ರಕಾರ ಸಣ್ಣ ಅಂಗಡಿಗಳೂ ದೊಡ್ಡ ಅಂಗಡಿಗಳೂ ಬೇರೆ ಬೇರೆ ಯಾಗಿ ದೃಷ್ಟಿಗೋಚರವಾಗುವವೋ ಅದೇ ರೀತಿಯಲ್ಲಿ ಈ ವ್ಯವಹಾರ ದೊಳಗೂ ಕೂಡ ಚಿಲ್ಲರ ವ್ಯಾಪಾರ, ಠೋಕ ವ್ಯಾಪಾರ ಮತ್ತು ಚಿಲ್ಲರ ಗಿರಾಕಿ, ಠೋಕ ಗಿರಾಕಿಗಳು ಕಂಡುಬರುತ್ತಿವೆ. ಈ ವ್ಯವಹಾರವು ಕಣ್ಣಿಗೆ ಕಾಣದಿದ್ದರೂ ಪ್ರತಿಯೊಬ್ಬನ ಮನದಲ್ಲಿ ಇದರ ಕಲ್ಪನೆಯಾ ಗದೆ ಇರದು; ಮತ್ತು ವ್ಯಾಪಾರಿಯಾಗಿಯೇ ಆಗಲಿ, ಗಿರಾಕಿಯಾ ಗಲಿ ಪ್ರತಿಯೊಬ್ಬನಿಗೆ ಇದರಲ್ಲಿ ಪ್ರವೇಶಿಸಬೇಕಾಗುತ್ತದೆ. ಈ ವ್ಯವ ಹಾರದ ಪ್ರೌಢತ್ವ ಮತ್ತು ವ್ಯಾಪಕತ್ವದ ಕಲ್ಪನೆಯಾಗುವದಕ್ಕೋಸ್ಕರ ಕೆಳಗಿನ ಸಂಗತಿಯು ಉದಾಹರಣೆಗಾಗಿ ಕೊಡಲ್ಪಟ್ಟಿದೆ. ನಮ್ಮ ದೇಶ ದಿಂದ ಪ್ರತಿವರ್ಷ ಹತ್ತಿ, ಜೋಳ, ಗೋದಿ, ಕಡ್ಲಿ, ತಂಬಾಕ, ಇಮಾರತಿಯ ಕಟ್ಟಿಗೆ ಮೊದಲಾದವುಗಳು ಪರದೇಶಗಳಿಗೆ ಹೋಗುವ ದರಿಂದ ಕೋಟಿಗಟ್ಲೆ ರೂಪಾಯಿಗಳು ನಮಗೆ ದೊರೆಯುತ್ತವೆ. ಇವೆ ಲ್ಲವುಗಳ ವ್ಯಾಪಾರವನ್ನು ಒಬ್ಬನೇ ಮಾಡುವದಿರುವುದಿಲ್ಲ. ಇವುಗ ಳಲ್ಲಿ ಸಾವಿರಾರು ಜನ ವ್ಯಾಪಾರಸ್ಥರೂ, ನೂರಾರು ಕಂಪನಿಗಳೂ ತೊಡಗಿರುತ್ತವೆ. ಈ ಯಾವತ್ತರೂ ಹಣದ ವ್ಯವಹಾರದಿಂದಲೇ ಹಣ ವನ್ನು ತಂದು ಅದರ ಬೆಲೆಯನ್ನು ಬಡ್ಡಿಯ ರೂಪದಿಂದ ಕೊಡುವರು. ಈ ರೀತಿಯಲ್ಲಿ ಪ್ರತಿವರುಷ ಒಂದು ಅಬ್ಜ ರೂಪಾಯಿಗಳನ್ನು ಹಣದ ವ್ಯವಹಾರದ ಮುಖಾಂತರ ತರುತ್ತಾರೆ. ಇದರಿಂದ ಇದರ ವಿಸ್ತಾ ರದ ಕಲ್ಪನೆಯು ಹೊಳೆಯಬಹುದು. ಹಳ್ಳಿಯ ಮಾರವಾಡಿಯು ಶಹ ರದ ಸಾಹುಕಾರನಿಂದ, ಆ ಸಾಹುಕಾರನು ಬೇರೆ ದೊಡ್ಡ ದೊಡ್ಡ ಅಂಗಡಿಗಳಿಂದ ಮತ್ತು ಆ ಅಂಗಡಿಯ ಸಾಹುಕಾರನು ಎರಡನೆಯ

ಗೇತಗಳಿಂದ ಹಣವನ್ನು ಕೂಡಿಹಾಕುವರು. ಇಂತಹ ಬಲವಾದ ವ್ಯವಹಾರವು ಚಕ್ಕಡಿಯ ಚಕ್ರದಂತೆ ಯಾವಾಗಲೂ ನಡೆಯುತ್ತಿರುತ್ತದೆ.

ಹಣದ ವ್ಯವಹಾರದ ಠೋಕ ವ್ಯಾಪಾರಸ್ಥರೆಂದರೆ, ಬ್ಯಾಂಕುಗಳು. ಸರಕಾರದ ಆಶ್ರಯವನ್ನು ಹೊಂದಿ ಕಾಯಿದೆಗಳಿಂದ ಬಂಧಿಸಲ್ಪಟ್ಟಿರುವ ಇಂತಹ ಒಂದು ರಿಝರ್ವ ಬ್ಯಾಂಕು ( Reserve Bank of India ) ನಮ್ಮಲ್ಲಿ ಇರುವದು. ಇದರ ಶಾಖೋಪಶಾಖೆಗಳು ಎಲ್ಲ ಕಡೆಯಲ್ಲಿಯೂ ಪಸರಿಸಿರುತ್ತವೆ. ಸರಕಾರೀ ಮಾಲಕಿಯುಳ್ಳ ಮತ್ತು ಬೇರೆ ಯಾವತ್ತು ಪ್ರಕಾರದ ಹಣವು ಈ ಬ್ಯಾಂಕಿನಲ್ಲಿ ಸಂಗ್ರಹಿಸಲ್ಪಡುತ್ತವೆ; ಮತ್ತು ಸರಕಾರವು ಬೇಡಿದಾಗ ಬೇಡಿದಷ್ಟು ಹಣವನ್ನು ಈ ಬ್ಯಾಂಕು ಕೊಡುತ್ತದೆ. ಜನರ ಠೇವುಗಳಾದರೂ ಇದರಲ್ಲಿ ಇಡಲ್ಪಡುತ್ತವೆ. ಈ ಪ್ರಕಾರ ಇದು ಯಾರಿಂದ ನೂರು, ಯಾರಿಂದ ಸಾವಿರ, ಯಾರಿಂದ ಲಕ್ಷಗಟ್ಲೆ ಹಣವನ್ನು ಒಟ್ಟುಗೂಡಿಸಿ, ಸಾಲದ ರೂಪದಿಂದಲೂ, ಹುಂಡಿಯ ರೂಪದಿಂದಲೂ ಜನರಿಗೆ ಹಣವನ್ನು ಉಪಯೋಗಿಸಲಿಕ್ಕೆ ಕೊಡುತ್ತದೆ. ಇದೊಂದು ಬ್ಯಾಂಕು ಹಣದ ವ್ಯವಹಾರದಲ್ಲಿಯ ಠೋಕ ವ್ಯಾಪಾರಿಯಾಗಿರುತ್ತದೆ. ಮುಂಬಯಿ, ಮದ್ರಾಸ, ಕಲಕತ್ತಾ ಮುಂತಾದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಹಣದ ವ್ಯವಹಾರಕ್ಕೋಸ್ಕರ ಕಂಪನಿಯ ವಿಶೇಷ ಕಾಯಿದೆಯ ಪ್ರಕಾರ ನೋಂದಾಯಿಸಿದ ಬೇರೆ ಬೇರೆ ತರದ ಬ್ಯಾಂಕುಗಳಿರುವವು. ಇವಾದರೂ ಜನರ ಕಡೆಯಿಂದ "ಹನಿಹನಿ ಕೂಡಿ ಹಳ್ಳ" ವೆಂಬಂತೆ ಠೇವುಗಳನ್ನು ತೆಗೆದುಕೊಂಡು ಹಣವನ್ನು ಒಟ್ಟುಗೂಡಿಸಿ ಮರಳಿ ಅದನ್ನು ವ್ಯಾಪಾರಸ್ಥರಿಗೆ ಉಪಯೋಗಿಸಲಿಕ್ಕೆ ಕೊಡುವವು. ಇವು ಹಣದ ವ್ಯವಹಾರದ ಠೋಕ ಗಿರಾಕಿಗಳು. ಇವಲ್ಲದೆ ಊರೂರಿಗೆ ಹತ್ತು ಇಪ್ಪತ್ತು ಸಾವಿರಗಳಂತೆ

ಜನರಿಗೆ ಹಣವನ್ನು ಪೂರೈಸುವ ಸಾಹುಕಾರರು ಇದ್ದೇಇರುವರು. ಇವರು ಚಿಲ್ಲರ ಗಿರಾಕಿಗಳು ಹತ್ತಿಯ ವ್ಯವಹಾರವನ್ನು ಮಾಡುವಂತಹ ದೊಡ್ಡ ದೊಡ್ಡ ವ್ಯಾಪಾರಿಗಳು ಅಂದರೆ ಯಾರ ಖರೀದಿಯು ಪ್ರತಿದಿವಸ ಲಕ್ಷಗಟ್ಲೆ ನಡೆಯುವದೋ ಅಂಥವರು ಅಥವಾ ಕಂಪನಿಗಳು ಇದರಲ್ಲಿಯ ಠೋಕ ಗಿರಾಕಿಗಳೆಂದರೆ ನಡೆಯಬಹುದು. ಸಾವಿರ, ಎರಡು ಸಾವಿರ ರೂಪಾಯಿಗಳ ವ್ಯಾಪಾರಸ್ಥರು ಚಿಲ್ಲರ ಗಿರಾಕಿಗಳು. ಇರಲಿ. ಇದು ಕೆಣ್ಣುಗಳಿಗೆ ಕಾಣದಂತಹ ಹಣದ ವ್ಯವಹಾರವಿರುತ್ತದೆ.

ನಮ್ಮ ಸಹಕಾರೀ ಚಳವಳಿಯ ಸಲುವಾಗಿ ಹಣದ ಕೊರತೆಯು ಬಹಳಿರುವದು. ಒಕ್ಕಲತನದ ಉದ್ಯೋಗಕ್ಕೆ ಎಷ್ಟು ಕಡಿಮೆ ಬಡ್ಡಿಯಿಂದ ಹಣವು ದೊರಕುವದೋ ಅಷ್ಟು ಬೇಕಾಗಿದೆ. ಇದಕ್ಕೋಸ್ಕರವಾಗಿಯೇ ಹಣದ ವ್ಯವಹಾರಕ್ಕೂ, ಸಹಕಾರೀ ಚಳವಳಿಗೂ ಶಕ್ಯವಿದ್ದಷ್ಟು ನಿಕಟ ಸಂಬಂಧವನ್ನುಂಟು ಮಾಡಬೇಕಾಗಿದೆ. ಸದ್ಯಕ್ಕೆ ಹಣದ ವ್ಯವಹಾರದೊಳಗೆ ವ್ಯಾಪಾರೀ ಜನರ ಪತ್ತು ಇರುತ್ತದೆ. ಇವರು ಇಂಪಿರಿಯಲ್ ಬ್ಯಾಂಕ, ಜಾಯಿಂಟ ಸ್ಟಾಕ್ ಬ್ಯಾಂಕ ಮತ್ತು ಬೇರೆ ಸಾಹುಕಾರ ಜನರಿಗೆ ಹಣವನ್ನು ಸುಲಭರೀತಿಯಿಂದ ಪೂರೈಸುವರು. ಇದರ ಕಾರಣವೇನಂದರೆ, ಈ ವ್ಯವಹಾರದಲ್ಲಿ ವ್ಯಾಪಾರಸ್ಥರು ತಮ್ಮ ಗೊತ್ತು ಗುರ್ತುಗಳನ್ನು ಚನ್ನಾಗಿ ಮಾಡಿಟ್ಟಿರುವರು. ವ್ಯವಹಾರದ ಮುಖ್ಯ ಸೂತ್ರದಾರನು ವ್ಯಾಪಾರಸ್ಥನಿರುವ ಮೂಲಕ ವ್ಯಾಪಾರಸ್ಥರ ಬಂಧುತ್ವವು ಇಲ್ಲಿ ತೀವ್ರ ಕೂಡುತ್ತದೆ. ಹಿಂದುಸ್ಥಾನದ ಮುಖ್ಯವಾದ ವ್ಯವಹಾರ ಅಥವಾ ಉದ್ಯೋಗವು ಒಕ್ಕಲತನವಿರುತ್ತದೆ. ನೂರಕ್ಕೆ ಎಂಬತ್ತರಂತೆ ಜನರು ಒಕ್ಕಲತನದಿಂದಲೇ ಉಪಜೀವಿಸುವರು. ಇಲ್ಲಿಯ ಭೂಮಿಯು ಫಲದ್ರೂಪವುಳ್ಳದ್ದೂ, ಹವೆಯು ಪೈರುಗಳಿಗೆ ಪೋಷಕವಾದದ್ದೂ ಮತ್ತು ರೈತ ಜನರು ಪ್ರಾಮಾಣಿಕರೂ, ಮೈಮುರಿದು ದುಡಿಯುವವರಿದ್ದಾಗ್ಯೂ, ಒಕ್ಕಲಿಗರಿಗೆ ಬೇಕಾಗುವ ಹಣವು ವ್ಯಾಪಾರೀ ಜನರಿಗಿಂತ ಯಾಕೆ ತುಟ್ಟಿಯಾಗಿ ಸಿಗುವದೆಂಬುದನ್ನು

ವಿಚಾರಿಸುವಾ. ಭೂಮಿಗಳು ಬೆಳೆಯದಿದ್ದಲ್ಲಿ ವ್ಯಾಪಾರವು ನಷ್ಟ ಹೊಂದುವದು. ಹೀಗಿದ್ದರೂ ಕೂಡ ವ್ಯಾಪಾರಸ್ಥರ ಶ್ರೀಮಂತಿಕೆಯೂ, ಒಕ್ಕಲಿಗರ ದರಿದ್ರತ್ವವೂ ಬೆಳೆಯುತ್ತಲೇ ಇರುವವು. ವ್ಯಾಪಾರ ಮತ್ತು ಒಕ್ಕಲತನದ ನಡುವೆ ನಿಜವಾಗಿಯೂ ಒಮ್ಮನಸ್ಸಿಲ್ಲ. ಇವೆರಡೂ ಒಂದಕ್ಕೊಂದು ಪರಿಪೋಷಕವಾಗಿರುತ್ತವೆ. ಭೂಮಿಗಳು ಚನ್ನಾಗಿ ಬೆಳೆದರೆ ವ್ಯಾಪಾರಕ್ಕೆ ಭರತೀ ಬರುತ್ತದೆ. ವ್ಯಾಪಾರದಲ್ಲಿ ಮೇಲಾಟ (Competition) ವಾಗಹತ್ತಿದರೆ ಭೂಮಿಯ ಉತ್ಪನ್ನಗಳಿಗೆ ಬೆಲೆಯು ಹೆಚ್ಚಿಗೆ ಬರುತ್ತದೆ. ಈ ಪ್ರಕಾರ ಪರಸ್ಪರ ಸಂಬಂಧವಿರುತ್ತದೆ. ಆದರೆ ಯಾವಪ್ರಕಾರ, ಎರಡೂ ಕಣ್ಣುಗಳು ಸಮೀಪದಲ್ಲಿದ್ದರೂ ಒಂದನ್ನೊಂದು ನೋಡಲಾರವೋ ಅದರಂತೆ ಒಕ್ಕಲತನದ ಮತ್ತು ವ್ಯಾಪಾರದ ಸಂಗತಿಯಾಗಿದೆ ಎರಡೂ ಕಣ್ಣುಗಳ ಇರುವಿಕೆಯನ್ನೂ ಮತ್ತು ಗುರ್ತನ್ನೂ ಮಾಡಿಕೊಡಲಿಕ್ಕೆ ಕನ್ನಡಿಯು ಹೇಗಿರುವದೋ ಅದರಂತೆಯೇ ವ್ಯಾಪಾರ ಮತ್ತು ಒಕ್ಕಲತನದ ಸಂಯೋಗವನ್ನು ಮಾಡಿಕೊಡುವದಕ್ಕೆ ( ನಮ್ಮ) ಸಹಕಾರೀ ಚಳವಳಿಯು ಉಪಯುಕ್ತವಾಗಿರುತ್ತದೆ.

ಪರಮೇಶ್ವರನ ದಯದಿಂದ ಹಿಂದುಸ್ಥಾನದ ಒಕ್ಕಲಿಗರಿಗೆ ಹಣವನ್ನು ಸುಲಭವಾಗಿ ದೊರಕಿಸುವ ಋತುಮಾನವು ನಮ್ಮ ಕಡೆಗೆ ಇರುತ್ತದೆ. ಒಕ್ಕಲಿಗರಿಗೆ ಹಣದ ಅವಶ್ಯಕತೆಯು ವೈಶಾಖಮಾಸದಿಂದ ಪೌಷ್ಯದವರೆಗೆ ಇರುತ್ತದೆ. ಈ ಕಾಲಕ್ಕೆ ಮೇಲೆ ಹೇಳಿದ ಬ್ಯಾಂಕುಗಳಲ್ಲಿ ಮತ್ತು ಸಾಹುಕಾರರಲ್ಲಿ ಹಣವು ಅನಾವಶ್ಯಕವಾಗಿ ಬಿದ್ದಿರುತ್ತದೆ. ಬ್ಯಾಂಕುಗಳು ಸಾಧಾರಣವಾಗಿ ಯಾವದರಿಂದ ಜನರಿಗೆ ಹಣವನ್ನು ಸಾಲವಾಗಿ ಕೊಡುವವೆಂಬುದರ ಕಡೆಗೆ ಲಕ್ಷವನ್ನಿಸೆದರೆ ಕಂಡುಬರುವದೇನಂದರೆ — ಜ್ಯೇಷ್ಠ, ಆಷಾಢ, ಮಾಸಗಳಲ್ಲಿ ಬ್ಯಾಂಕಿನ ಬಡ್ಡಿಯ ದರವು ನೂರಕ್ಕೆ ೫ ರಂತೆ ಇರುತ್ತದೆ. ಅದು ಬೆಳೆ ಬೆಳೆಯುತ್ತ ಪೌಷ್ಯ, ಮಾಘ, ಫಾಲ್ಗುಣಗಳಲ್ಲಿ ೮ ರವರೆಗೆ

ಮುಟ್ಟುತ್ತದೆ. ಇದಕ್ಕೆ ಕಾರಣವೇನಂದರೆ, ಈ ತಿಂಗಳುಗಳಲ್ಲಿ ವ್ಯಾಪಾರಸ್ಥರಿಗೆ ಹಣವು ಬೇಕಾಗುತ್ತದೆ. ಸಂತೆಯಲ್ಲಿ ಜೋಳ ಮುಂತಾದ ಧಾನ್ಯಗಳು ಸಾಕಷ್ಟು ಇಲ್ಲದೆ ಇದ್ದು, ಕೊಂಡುಕೊಳ್ಳುವವರು ಬಹಳಿದ್ದರೆ ಆ ಧಾನ್ಯದ ಬೆಲೆಯು ಯಾವ ಪ್ರಕಾರ ಹೆಚ್ಚುತ್ತದೆಯೋ ಅದರಂತೆ ಹಣವು ನಿಯಮಿತವಾದದ್ದು ಬೇಡುವವರ ಪ್ರಮಾಣವು ಹೆಚ್ಚಾದರೆ ಬ್ಯಾಂಕುಗಳು ತಮ್ಮ ಬಡ್ಡಿಯ ದರವನ್ನು ಅಥವಾ ಹಣದ ಬೆಲೆಯನ್ನು ಹೆಚ್ಚಿಸುತ್ತಿವೆ. ಒಕ್ಕಲಿಗರಿಗೆ ಯಾವಕಾಲದಲ್ಲಿ ಹಣದ ಅವಶ್ಯಕತೆಯು ಇರುವದೋ ಆ ಕಾಲದಲ್ಲಿ ಎರಡನೆಯವರಿಗೆ ಇರುವದಿಲ್ಲ. ಆಗ ಒಕ್ಕಲಿಗರಷ್ಟೇ ಗಿರಾಕಿಗಳಿರುವದರಿಂದ ಹಣದ ಬೆಲೆಯು ಇಳಿದಿರುತ್ತದೆ. ಈ ಪರಿಸ್ಥಿತಿಯು ಅನುಕೂಲವಿದ್ದಾಗ್ಯೂ ನಾವು ಅದರ ಲಾಭವನ್ನು ಇಂದಿನವರೆಗೆ ಮಾಡಿಕೊಂಡಿರುವದಿಲ್ಲ. ಇಷ್ಟುದಿವಸಗಳವರೆಗೆ ನಾವು ಅಲಕ್ಷ್ಯ ಮಾಡಿದೆವು. ಆದರೆ ಈಗ ಮಾತ್ರ ಹಾಗೆ ಮಾಡಿ ಉಪಯೋಗವಿಲ್ಲ. ನಮ್ಮ ಸಹಕಾರೀ ಚಳವಳಿಯು ಈಗ ಬಾಲ್ಯಾವಸ್ಥೆಯಲ್ಲಿರದೆ ದೊಡ್ಡದಾಗುತ್ತ ನಡೆದಿರುತ್ತದೆ. ಇಲ್ಲಿಯ ವರೆಗೆ ನಾವು ನಮ್ಮ ನಮ್ಮೊಳಗೆ ಪ್ರಯತ್ನಮಾಡಿ ಹೇಗಾದರೂ ಸರಿಪಡಿಸಿಕೊಂಡೆವು. ಇನ್ನು ಮೇಲೆ ಮಾತ್ರ ತಡೆಯುವದು ಕಠಿಣವಿರುತ್ತದೆ. ಅದಕ್ಕಾಗಿಯೇ ನಾವು ಹಣದ ವ್ಯವಹಾರದಲ್ಲಿ ನಮ್ಮ ಗುರ್ತನ್ನು ಮಾಡಿಕೊಂಡು ಕಡಿಮೆಯಾದ ಬೆಲೆಯ ಮತ್ತು ಅನುಕೂಲ ಪರಿಸ್ಥಿತಿಯ ಲಾಭವನ್ನು ಪಡೆದುಕೊಳ್ಳಲಿಕ್ಕೆ ವಿಲಂಬ ಮಾಡಿ ಉಪಯೋಗವಿಲ್ಲ. ಯಾಕಂದರೆ, ಈ ಚಳವಳಿಯ ವ್ಯಾಪ್ತಿಯು ಸಂಘಗಳಲ್ಲಿ ದುಡಿಯುವ ಭಾಂಡವಲವು ಸದ್ಯಕ್ಕೆ (೧೯೫೦) ಎರಡು ನೂರು ಕೋಟಿ ರೂಪಾಯಿಗಳಿಗೆ ಮೀರಿರುವದು. ಇದರಲ್ಲಿ ತಮ್ಮ ಸ್ವಂತಕ್ಕಿಂತ, ಎರಡನೇಯವರ ಹಣವು ಎರಡರಷ್ಟು ಇರುತ್ತದೆಂದು ಸ್ಥೂಲಮಾನದಿಂದ ಹೇಳಹುದು. ನಮಗೆ ಈ ಚಳವಳಿಯನ್ನು ಹೆಚ್ಚಿಗೆ ಬೆಳೆಯಿಸುವದು ಇಷ್ಟವಿರುತ್ತದೆ. ಆದರೆ ಜನರ ಹಣದ ನಂಬಿಗೆಯ

ಮೇಲೆ ಮಾತ್ರ ನಾವು ಅದನ್ನು ಬೆಳಿಸಹೋದರೆ, ನಮ್ಮ ಪತ್ತು ಇರದೆ ಇದ್ದಲ್ಲಿ ನಾವು ಧಡಕ್ಕೆ ಹತ್ತಲಾರೆವು. ದೈವಯೋಗದಿಂದ ಎಲ್ಲ ಜನರು ತಮ್ಮ ತಮ್ಮ ಠೇವುಗಳನ್ನು ಏಕಕಾಲಕ್ಕೆ ತಿರುಗಿ ಬೇಡಿದರೆ ನಮ್ಮ ಕಡೆಗೆ ಕೊಡುವ ವ್ಯವಸ್ಥೆಯು ಏನಿರುವದೆಂಬದರ ಬಗ್ಗೆ ವಿಚಾರಿಸಿರಿ. ನಮ್ಮ ಹತ್ತರ ಬೇಕಾದಷ್ಟು ಆಸ್ತಿ ಇರುತ್ತದೆ. ಆದರೆ ಉಪಯೋಗ ವೇನು ? ಠೇವುದಾರರು ಬೇಡಿದ ಕೂಡಲೆ ಆಗಿಂದಾಗ್ಗೆ ಕೊಡಲಿಕ್ಕೆ ನಮ್ಮ ಹತ್ತರ ರೋಖ ಹಣವಿರಬೇಕಾಗುತ್ತದೆ. ಆದ್ದರಿಂದಲೇ ಪ್ರತಿ ಯೊಂದು ಸೆಂಟ್ರಲ್‌ಬ್ಯಾಂಕು ೧೦೦ಕ್ಕೆ ೩೩ರಂತೆಫ್ಲುಇಡ್ ರಿಸೋರ್ಸ ವೆಂಬ ( ಗಂಗಾಜಲಿ ) ಕೆಲವೊಂದು ಹಣವನ್ನು ಕಾದಿಡಬೇಕೆಂದು ಅನುಭವದಿಂದ ಕಂಡುಬಂದಿರುತ್ತದೆ. ಈ ರೋಖ ಗಂಗಾಜಲಿ ಯನ್ನು ಕಾದಿಡದೆ ಹೋದರೆ ಪ್ರಸಂಗೋಪಾತ ನಮ್ಮ ಮೇಲೆ ಆಪತ್ತು ಬಂದು ನಮ್ಮನ್ನು ಯಾರೂ ಕೇಳದೆ ನಮ್ಮ ಸಂಸ್ಥೆಗಳ ಯಾವತ್ತೂ ಪ್ರತಿಷ್ಠಿತತನವು ಇಲ್ಲದಂತಾಗುವದು. ಸಾರಾಂಶವೇನಂದರೆ, ಈ ರೋಖ ಉಳಿನಿಧಿ-ಗಂಗಾಜಲಿ-ಯನ್ನು ( Fluid Resource ) ಕಾದಿ ಡುವದು ಅತಿ ಅವಶ್ಯವಿರುತ್ತದೆ. ಜನರ ಹಣವು ಪೊಟ್ಟಮೊದಲು ನೋಡುವದರಲ್ಲಿ ಕಂಡಷ್ಟು ಸುಲಭವಿರುವದಿಲ್ಲೆಂಬುದು ಮೇಲಿನ ಉದಾಹರಣೆಯಿಂದ ಸ್ಪಷ್ಟವಾಗಿರುತ್ತದೆ. ನಮಗೆ ಹಣವು ಮಾತ್ರ ಅವಶ್ಯವಾಗಿ ಬೇಕು; ಆದರೆ ಜನರಿಂದ ಅದನ್ನು ೪-೬ ರಂತೆ ಠೇವಾಗಿ ಇಟ್ಟುಕೊಳ್ಳುವದು ಕಠಿಣ, ಈ ಇಬ್ಬಣದ ಪೇಚು ನಮ್ಮ ಮುಂದೆ ಇರುವದು. ಇದರೊಳಗಿಂದಲೇ ನಮಗೆ ಮಾರ್ಗವನ್ನು ಹುಡುಕಬೇ ಕಾಗಿದೆ. ಅದನ್ನು ಹೇಗೆ ಹುಡುಕಬೇಕೆಂಬುದನ್ನು ಕ್ರಮವಾಗಿ ವಿಚಾರ ಮಾಡುವಾ.

ಹಣದ ವ್ಯವಹಾರದಲ್ಲಿ ನಮ್ಮ ಗೊತ್ತು ಗುರ್ತುಗಳನ್ನು ಮಾಡಿ ಕೊಳ್ಳಬೇಕು. ಮತ್ತು ಅದರಲ್ಲಿ ಉದ್ಯೋಗಮಾಡುವ ಮಾರ್ಗವನ್ನು

ಕಂಡುಕೊಳ್ಳಬೇಕು. ನಮ್ಮ ಆಸ್ತಿಯ ಅಂದರೆ ಪತ್ತಿನ ವ್ಯಾಪಾರದ ಅಂಗಡಿಯು ಗೊತ್ತನ್ನು ಹಣದ ವ್ಯವಹಾರದೊಳಗಿನ ಪೋಕ ವ್ಯಾಪಾರ ಸ್ಥರಿಗೆ ಮಾಡಿಕೊಡಬೇಕು. ಹಣದ ವ್ಯವಹಾರದಲ್ಲಿ ಕಾರ್ಯಗಳು ಮುಖ್ಯವಾಗಿ "ವಚನ ಕಾಗದ" ಅಥವಾ "ಪ್ರಾಮಿಸರಿ ನೋಟ್ಸ" "ಹುಂಡಿ" ಅಥವಾ ಅದರಂತಿರುವ "ಬಿಲ್ಸ ಅಫ್ ಎಕ್ಸಚೇಂಜ" ಇವು ಗಳಿಂದ ನಡೆಯುತ್ತವೆ. ಹಣದಅವಶ್ಯಕತೆ ಯುಂಟಾದ ಕೂಡಲೆ ಪತ್ತಿನ ಜೋರಿನಿಂದ ಒಬ್ಬ ವ್ಯಾಪಾರಸ್ಥನು ಮತ್ತೊಬ್ಬರ ಮೇಲೆ ಹುಂಡಿಯನ್ನು ಬರೆಯುತ್ತಾನೆ. ಹುಂಡೀ ಸ್ವೀಕರಿಸುವ ಸಾಹುಕಾರ ನಿಗೆ ಹಣದ ಅಡಚಣಿಯಾದಾಗ ಅದೇ ಹುಂಡಿಯನ್ನು ಅವನು ಮೂರನೇದವನಿಗೆ ಮಾರಿಕೊಳ್ಳುತ್ತಾನೆ. ಈ ಪ್ರಕಾರ ಅದು ಮಾರಾ ಟವಾಗುತ್ತಾಗುತ್ತ ಗೊತ್ತಾದ ಮುದ್ದತ್ತಿನ ದಿವಸಕ್ಕೆ ಯಾರ ಹತ್ತರ ಆ ಹುಂಡಿಯು ಇರುವದೋ ಅವರು ವೊಟ್ಟವೊದಲು ಹುಂಡಿಯನ್ನು ಬರೆದ ಸಾವುಕಾರನ ಕಡೆಗೆ ಅದನ್ನು ತಂದು ಹಣವನ್ನು ತೆಗೆದುಕೊ ಳ್ಳುತ್ತಾನೆ. ಇದರಂತೆಯೇ ಪ್ರಾಮಿಸರಿ ನೋಟಿನದಾದರೂ ಇರು ತ್ತದೆ. ಇದರಲ್ಲಿಯ ಕರಾರವೆಂದರೆ "ಯಾರ ಕಡೆಯಿಂದ ಹಣವನ್ನು ತೆಗೆದುಕೊಂಡಿರುತ್ತದೋ ಅವರಿಗೆ ಅಥವಾ ಅವರು ಅಪ್ಪಣೆ ಮಾಡಿದ ವರಿಗೆ ಬೇಡಿದ ಕೂಡಲೇ ಹಣವನ್ನು ಕೊಡುವದರಲ್ಲಿ ಬರುವದು. ಈ ಕರಾರಿನ ಕಸುವಿನ ಮೇಲೆ ಪ್ರಾಮಿಸರಿ ನೋಟ್ಸ ಸಹಾ ಮಾರಾಟ ಮಾಡುವದರಲ್ಲಿ ಬರುವವು, ಆದರೆ "ಹುಂಡಿ" ಮತ್ತು "ಬಿಲ್ಸಆಫ್ ಎಕ್ಸಚೇಂಜ" ಇವುಗಳಿಂದಲೇ ವ್ಯಾಪಾರವು ಬಹಳ ನಡೆಯುತ್ತದೆ. ಸಣ್ಣ ಸಣ್ಣ ಸಾವುಕಾರರು ಬ್ಯಾಂಕಿನಿಂದ ರೂಪಾಯಿಗಳನ್ನು ತೆಗೆದು ಕೊಳ್ಳುವಾಗ್ಗೆ ಪ್ರಾಮಿಸರಿ ನೋಟ್ಸುಗಳನ್ನು ಬರೆದುಕೊಡುತ್ತಾರೆ. ಈ ಯಾವತ್ತೂ ಕಾರಭಾರದ ತಳದಲ್ಲಿ ಮಾರಾಟಮಾಡುವ ಮತ್ತು ಮಾರಾಟಕ್ಕೆ ತೆಗೆದುಕೊಳ್ಳುವ ಪದ್ಧತಿಯು ಇರುತ್ತದೆ. ಇದರಿಂದ ಹುಂಡಿಗಳು ಸರಕಾರೀ ನೋಟುಗಳಂತೆ ಚಲನೀ ನೋಟ

ಗಳಾಗುತ್ತವೆ. ಮತ್ತು ನಾಣ್ಯಗಳಿಂದ ಪ್ರತ್ಯಕ್ಷ ಕೊಂಡುಕೊಳ್ಳುವ ದನ್ನು ಮಾಡದೆ ಬರೇ ಪತ್ತಿನ ಮೇಲಿಂದ–ಕೇವಲ ಕಾಗದದ ಚೀಟಿ ಗಳಿಂದ ವ್ಯಾಪಾರೀ ಜನರು ತಮ್ಮ ತಮ್ಮೊಳಗೆ ಲಕ್ಷ್ಯಗಟ್ಲೆ ರೂಪಾ ಯಿಗಳ ವ್ಯವಹಾರವನ್ನು ಮಾಡುತ್ತಾರೆ. ನಮ್ಮ ಉದ್ಯೋಗದಲ್ಲಿ ಹುಂಡಿಗಳಿರುವದಿಲ್ಲ. ಆದರೆ ಪ್ರಾಮಿಸರಿ ನೋಟುಗಳಿರುವವು. ಸಹ ಕಾರೀ ಸಂಘಕ್ಕೆ ಹಣದ ಅವಶ್ಯಕತೆಯುಂಟಾದ ಕೂಡಲೆ ಅದು, ಚೇರಮನ್ ಅಥವಾ ಸೆಕ್ರೆಟರಿಯ ಸಹಿಯಿಂದ ಸಂಘದ ಹೆಸರಿನಲ್ಲಿ ಸೆಂಟ್ರಲ್ ಬ್ಯಾಂಕಿಗೆ ಒಂದು ಪ್ರಾಮಿಸರಿ ನೋಟನ್ನು ಬರೆದುಕೊಡು ತ್ತದೆ. ಈ ರೀತಿಯಿಂದ ಒಂದೊಂದು ಸೆಂಟ್ರಲ್ ಬ್ಯಾಂಕಿನ ಹತ್ತರ ಇಪ್ಪತ್ತು ಮೂವತ್ತು ಸಾವಿರ ರೂಪಾಯಿಗಳ ಪ್ರಾಮಿಸರಿ ನೋಟುಗ ಳಿರುತ್ತಿದ್ದು ಸದರ ಬ್ಯಾಂಕಿಗೆ ಹಣದ ಅವಶ್ಯಕತೆಯಾದ ಕೂಡಲೆ ಆ ನೋಟುಗಳನ್ನು ಮಾರಾಟಮಾಡಿ ಹಣವನ್ನು ಕೂಡಿಸಬಹುದು. ಈ ಪದ್ಧತಿಯು ನಮ್ಮಲ್ಲಿ ಇದುವರೆಗೂ ಬಳಿಕೆಯಲ್ಲಿ ಬಂದಿಲ್ಲ. ಇದೊಂದು ನಮ್ಮಲ್ಲಿಯ ಅಡಚಣಿಯಂದೇ ಹೇಳಬಹುದು. ಇದರ ನಿಜ ವಾದ ಕಾರಣವೇನಂದರೆ ಸಾವುಕಾರ ಜನರಿಗೂ ಬ್ಯಾಂಕುಗಳಿಗೂ ನಮ್ಮ ವ್ಯವಹಾರ ಮತ್ತು ಕಾರಭಾರಗಳ ಪರಿಚಯವಿಲ್ಲ. ಸಾಹು ಕಾರರೂ ಬ್ಯಾಂಕುಗಳೂ ಜನರ ಸ್ಥಾವರ ಆಸ್ತಿಯ ಕಡೆಗೆ ಲಕ್ಷ್ಯ ಕೊಡದೆ ಬರೇ ಪತ್ತಿನ ಕಡೆಗೆ ಅಂದರೆ ಗೊತ್ತುಮಾಡಿದ ಮಿತಿಗೆ ಹಣವನ್ನು ತಿರುಗಿ ಕೊಡುವ ಸಾಮರ್ಥ್ಯದ ಕಡೆಗೆ ನೋಡುತ್ತಾರೆ. ಪತ್ತನ್ನು ಕಾಯ್ದುಕೊಳ್ಳುವ ವಿಷಯದಲ್ಲಿ ವ್ಯಾಪಾರಸ್ಥರು ಬಹಳೇ ತತ್ಪರರಿರುವರು. ಒಂದು ವೇಳೆ ನಿಯಮಿಸಿದ ವೇಳೆಗೆ ಹಣವನ್ನು ಕೊಡದೆ ಹೋದರೆ ಹುಂಡಿಯನ್ನು ಬರೆಯುವ ಸಾಹುಕಾರನಿಗೆ ಪ್ರಾಣಾಂತ ವೇದನೆಗಳಾಗುತ್ತವೆ. ಇದಕ್ಕೆ "ಪತ್ತು" ಎನ್ನುವರು. ಆದರೆ ನಮ್ಮಲ್ಲಿರುವ ಪದ್ಧತಿಯ ಕಡೆಗೆ ತಸು ಹೊರಳುವಾ. ನಮ್ಮ ಒಕ್ಕಲಿಗರು ಕರಾರು ಮಾಡುವಾಗ ಅಥವಾ ಬರೆದುಕೊಡುವಾಗ

ಎಂಥಹ ಬೇಕಾದಂತಹ ನಿಯಮಗಳಿಗೆ ಬದ್ಧರಾಗುವರು. ಹಣವನ್ನು ಮುದ್ದತಿಗೆ ಸರಿಯಾಗಿ ಕೊಡಲಿಕ್ಕೆ ತಪ್ಪಿದಲ್ಲಿ ೧೦೦ಕ್ಕೆ ೭೫ರಂತೆ ಸಹ ಬಡ್ಡಿಯನ್ನು ಕೊಡುವರಲ್ಲದೆ ವೇಳೆಗೆ ಸರಿಯಾಗಿ (ಮೊದಲು ಕರಾರು ಮಾಡಿದಂತೆ) ಹಣವನ್ನು ಕೊಡುವದಿಲ್ಲ. ಇದೇ ವ್ಯಾಪಾರಸ್ಥರ ಮತ್ತು ಒಕ್ಕಲಿಗರ ನಡುವಿರುವ ಮಹದಂತರವು. ಒಬ್ಬರ ಏರುವಿಕೆಗೂ ಮತ್ತೊಬ್ಬರ ಇಳುವಿಕೆಗೂ ಇದೊಂದೇ ಅಂತರವು. ಒಕ್ಕಲಿಗರ ಉನ್ನತಿಯನ್ನು ಬಯಸುವವರು ಕರಾರು ( ನಿಯಮ ) ಗಳ ಪವಿತ್ರತ್ವವನ್ನು ಚನ್ನಾಗಿ ತಿಳಿಸಿ ಹೇಳಬೇಕು. ಎರಡನೆಯವರ ಹಣವನ್ನು ಬೇಕಾದಂಥ ನಿಯಮಗಳಿಗೆ ಒಳಪಟ್ಟು ಹೇಗೆ ತರುವನೋ ಹಾಗೆಯೇ ಬೇಕಾದಂಥ ಸಂಕಟ-ಅಡಚಣಿಗಳನ್ನು ಬದಿಗೊತ್ತಿ ಮುದ್ದತಿಗೆ ಸರಿಯಾಗಿ ಹಣವನ್ನು ತಿರುಗಿ ಕೊಡಬೇಕು. ಈ ಪದ್ಧತಿಯ ಅಭಾವದಿಂದ ಒಕ್ಕಲಿಗರ ವರ್ಗವು ನಿಜವಾಗಿಯೂ ಸಂಪನ್ನರಿದ್ದಾಗ್ಯೂ, ಅವರ ಮೇಲೆ ಎರಡನೇಯವರ ವಿಶ್ವಾಸವು ಕೂಡ್ರುವದೇ ಇಲ್ಲ. ಒಕ್ಕಲಿಗರಿಗೆ ಸಾಲಕೊಡುವ ಪ್ರಸಂಗದಲ್ಲಿ ಅವರ ಪತ್ತಿನ ಕಡೆಗೆ ಲಕ್ಷ್ಯಕೊಡದೆ ಅವರ ಹತ್ತರಿರುವ ಸ್ಥಾವರ ಆಸ್ತಿಯಕಡೆಗೆ ನೊಡುವರು. ಪ್ರಾಮಿಸರಿ ನೋಟ, ಹುಂಡಿಗಳಿಂದ ಅವರ ಕೂಡ ವ್ಯವಹಾರಮಾಡದೆ ಕಬ್ಜಾವತ್ತಿ ಮುಂತಾದವುಗಳಿಂದ ಮಾಡುವದರಲ್ಲಿ ಬರುತ್ತದೆ. ವ್ಯಾಪಾರಸ್ಥರ ಮತ್ತು ಒಕ್ಕಲಿಗರ ನಡುವಿರುವ ಈ ಅಂತರವನ್ನು ಹೋಗಲಾಡಿಸುವದಕ್ಕೋಸ್ಕರ ಸಹಕಾರೀ ಚಳವಳಿಯ ಸಹಾಯವು ಅವಶ್ಯವಿರುತ್ತದೆ. ಸ್ವಾವಲಂಬನ, ಮಿತವ್ಯಯ ಮತ್ತು ವಚನ ಪಾಲಿಸುವಿಕೆ ಇವೇ ಆಯುಧಗಳಿಂದ ಒಕ್ಕಲಿಗರು ತಮ್ಮನ್ನು ಕಾಪಾಡಿಕೊಳ್ಳಬೇಕು. ಇದೇ ಈ ಚಳವಳಿಯ ಧ್ಯೇಯವು. ಒಕ್ಕಲಿಗರಂತಹ ಅದ್ಭುತ, ಬಲವತ್ತರ ಮತ್ತು ಸಾಮರ್ಥ್ಯವುಳ್ಳವರ ಮುಂದೆ ಯಾರ ಆಟವೂ ನಡೆಯಲಾರದು. ವ್ಯಾಪಾರಸ್ಥರಿಗಿರುವ ಅವಯವಗಳೇ ಒಕ್ಕಲಿಗರಿಗೂ ಇರುವವು.

ಒಬ್ಬರು ಅವುಗಳ ಉಪಯೋಗ ಮಾಡಿ ಮತ್ತೊಬ್ಬರು ಮಾಡದ ಕಾರಣ ಸಹಕಾರೀ ಚಳವಳಿಯು ಒಕ್ಕಲಿಗರಿಗೆ ಮೊಟ್ಟಮೊದಲು ಸ್ವಾವಲಂಬನದ ಕಿತ್ತೆಯನ್ನು ತೀಡಲು ಹೇಳುತ್ತದೆ. ಇರಲಿ. ಹಣದ ವ್ಯವಹಾರದಲ್ಲಿ ತಮ್ಮ ವರ್ಚಸ್ಸನ್ನು ಬೆಳೆಯಿಸಬೇಕಾದರೆ ಒಕ್ಕಲಿಗರು ವ್ಯಾಪಾರದಲ್ಲಿ ಕೈಹಾಕಬೇಕು ಕೊಟ್ಟ ವಚನವನ್ನು ಪಾಲಿಸಬೇಕು. ಉಪವಾಸ ಬೀಳುವ ಪ್ರಸಂಗ ಬಂದರೂ ಒಮ್ಮೆ ಒಳಪಟ್ಟ ಕರಾರುಗಳಿಗೆ ಮೀರಬಾರದು, ಇಷ್ಟಾದರೆ ಜಗತ್ತೆಲ್ಲಾ ತನ್ನ ಹಣವನ್ನು ಒಕ್ಕಲಿಗರ ಸ್ವಾಧೀನವಾಡಲಿಕ್ಕೆ ಸಿದ್ಧವಾಗುತ್ತದೆ. ಆ ಮೇಲೆ ಸಾವುಕಾರ ಅಥವಾ ಬ್ಯಾಂಕುಗಳು ಸಿದ್ಧರಾಗುವದರಲ್ಲೇನು ಆಶ್ಚರ್ಯ ?

ಹಣದ ವ್ಯವಹಾರದಲ್ಲಿ ಪ್ರತಿಯೊಬ್ಬನು ತನ್ನ ಹತ್ತಿರುವ ಹಣವನ್ನು ಯಾವಾಗಲೂ ನಿರುಪಯೋಗೀ ಬೀಳುಕೊಡುವದಿಲ್ಲ. ಹಣವು ಒಂದು ಪ್ರಕಾರದ ಮಾಪಿನಂತೆ ( ಅಳತೆ ) ಇರುತ್ತದೆ. ಜೋಳ, ಗೋದಿ, ಅಕ್ಕಿ, ಬೇಳೆ ಮುಂತಾದವುಗಳನ್ನು ಅಳೆಯುವದಕ್ಕೋಸ್ಕರ ಯಾವ ಪ್ರಕಾರ ಗಿರಪಾವು, ಪಾವು,ಪಡಿಗಳಿರುವವೋ ಅದರಂತೆಯೇ ಬೆಳ್ಳಿ, ಬಂಗಾರದ ತುಣುಕುಗಳ ಮೇಲೆ ರಾಜಮುದ್ರೆಯನ್ನೊತ್ತಿದ ರೂಪಾಯಿ, ಪವನಗಳಿರುವವು. ಈ ಮಾಪಿನಿಂದ ಶ್ರಮವು ಅಳೆಯಲ್ಪಡುತ್ತದೆ.

ಹಣವನ್ನು ಗಡಿಗೆಯಲ್ಲಿ ಹಾಕಿ ಬಚ್ಚಿಡುವದು ಮಹತ್ಪಾಪವು. ಎತ್ತುಗಳನ್ನು ಹೊಲಗೆಲಸಕ್ಕೆ ಹಚ್ಚದೆ ಬರೀ ಹಕ್ಕೆಯಲ್ಲಿಯೇ ಕಟ್ಟುವದು, ಹೇಗೆ ನಿರುಪಯುಕ್ತವೋ ಹಾಗೆ ಕೊಡಕೊಳ್ಳುವ ಮುಖ್ಯ ಸಾಧನವಾದ ಹಣವನ್ನು ಬಚ್ಚಿಡುವದು ನಿರುಪಯುಕ್ತವು. ಅದನ್ನು ಯಾವಾಗಲೂ ದುಡಿಯುವದರಲ್ಲಿ ತೊಡಕಿಸಿರಬೇಕು. ಈ ತತ್ವವನ್ನು ವ್ಯಾಪಾರಸ್ಥರು ಚನ್ನಾಗಿ ಕಂಡುಹಿಡಿದದ್ದರಿಂದ ಅವರು

ದಿನೇ ದಿನೇ ವ್ಯವಹಾರದಲ್ಲಿ ಪ್ರಭಲರಾಗುತ್ತ ನಡೆದಿರುವರು. ಅವರು ಒಂದು ವೇಳೆ ಹಣದ ಉಪಯೋಗವನ್ನು ಮಾಡಿಕೊಳ್ಳಲಸಮರ್ಥ ರಾದರೆ ಅದನ್ನು ಸದುಪಯೋಗವಮಾಡುವಂಥ ಎರಡನೇ ಯೋಗ್ಯ ಸಭ್ಯ ಗ್ರಹಸ್ಥನ ಕಡೆಗೆ ಕೊಡುವರು. ಠೇವಿನ ರೂಪದಿಂದಾಗಲಿ ಅಥವಾ ಅತಿ ಸ್ವಲ್ಪ ಬಡ್ಡಿಯದರದಿಂದಾಗಲಿ ಹಣವನ್ನು ಒಬ್ಬ ಯೋಗ್ಯ ಮನುಷ್ಯನ ಸ್ವಾಧೀನಪಡಿಸುವದಕ್ಕೆ ಸರಾಫೀ (Banking) ಎಂಬ ಸಂಜ್ಞಯುಂಟು. ಇದರಿಂದ ದುಡ್ಡು ದುಡಿಯತೊಡಗಿ ಪೇಟಿ ಯಲ್ಲಿ ಹರಿದಾಡಲಿಕ್ಕೆ ಹತ್ತಿದಕೂಡಲೆ ವ್ಯವಹಾರವು ಸುಲಭವಾಗಿ ಎರಿಕೆಯ ಭಾರಣಿಯು ಇಲ್ಲದಂತಾಗುವದು. ಹಣದ ಸರಾಫೀ ಮಾಡುವ ರುಚಿಯು ನಮಗೆ ಹತ್ತಲಿಕ್ಕೇ ಬೇಕು. ಹತ್ತರ ಹಣವೇ ಇಲ್ಲದೆ ಹೋದರೆ ವ್ಯಾಪಾರವನ್ನು ಹೇಗೆ ಮಾಡಬೇಕೆಂದು ಯಾರಾ ವರೂ ಕೇಳಬಹುದು. ಆದರೆ ಅದು ಶುದ್ಧ ತಪ್ಪು. ಪ್ರತಿಯೊಬ್ಬನೂ ಅದನ್ನು ಹೆಚ್ಚು ಕಡಿಮೆ ಪ್ರಮಾಣದಿಂದ ಮಾಡಲು ಶಕ್ತನಿರುವನು. ಉದಾಹರಣೆಗಾಗಿ, ಒಬ್ಬ ರೈತನಿಗೆ ಒಂದೇ ಗಾಡಿ ಹತ್ತಿಯು ಬೆಳೆದಿ ರುವದೆಂದು ಕಲ್ಪಿಸುವಾ. ಇಷ್ಟೇ ಉತ್ಪನ್ನದ ಮೇಲಿಂದ ಅವನು ಒಂದು ವರುಷದವರೆಗೆ ತನ್ನ ಪ್ರಪಂಚವನ್ನು ಸಾಗಿಸುವನೆಂದು ತಿಳಿ ವರೆ ಅವನಿಗೆ ಅದನ್ನು ಒಯ್ದು ಕಾಟನ್ ಮಾರ್ಕೇಟಿನಲ್ಲಿ ಮಾರಿದರೆ ಒಂದು ನೂರು ರೂಪಾಯಿಗಳ ದರದಂತೆ ಸರಾಸರಿ ೧೫೦ ರೂಪಾ ಯಿಗಳು ದೊರೆಯುವವು. ಇದರಲ್ಲಿ ೫೦ | ೭೫ ರೂಪಾಯಿಗಳಿಂದ ಪ್ರಪಂಚಕ್ಕೆ ಅವಶ್ಯವಿರುವ ಪದಾರ್ಥಗಳನ್ನು ಕೊಂಡುಕೊಳ್ಳುತ್ತಾನೆ. ಇನ್ನುಳಿದ ೫೦।೭೫ ರೂಪಾಯಿಗಳನ್ನು ಅವನು ಮನೆಗೆ ಒಯ್ದು ಎಲ್ಲಿ ಡುವನು ? ನಿಸ್ಸಂದೇಹವಾಗಿ ತನ್ನ ಮನೆಯಲ್ಲಿ, ತನ್ನ ಪೆಟ್ಟಿಗೆಯಲ್ಲಿ ಇಲ್ಲವೆ ನೆಲದಲ್ಲಿ ಇಡುವನು. ಆ ಮೇಲೆ ತನ್ನ ಖರ್ಚಿಗೆ ಬೇಕ: ಬೇಕಾದಾಗ ಸಾವಕಾಶವಾಗಿ ಹೊರಗೆ ತೆಗೆಯುತ್ತಾನೆ. ಇದೇ ಹಣ ವನ್ನು ಅವನು ತನ್ನ ಹತ್ತರ ಇಟ್ಟುಕೊಳ್ಳದೆ ಮತ್ತೆ ತನ್ನಂತಹ ಬೇೕ

ಜನರ ಹಣದೊಂದಿಗೆ ಯಾವದಾದರೊಂದು ಸೆಂಟ್ರಲ್ ಬ್ಯಾಂಕಿನಲ್ಲಿ ಠೇವು ಇಟ್ಟರೆ ನೂರಕ್ಕೆ ೪-೫ರಂತೆ ಬಡ್ಡಿ ಬರುವದು. ಪ್ರತಿ ತಿಂಗಳಿಗೆ ಮೇಲು ಖರ್ಚಿಗೆ ಬೇಕಾಗುವಷ್ಟು ಅಂದರೆ ೫೦|೭೫ರೂಪಾಯಿಗಳಂತೆ ಹಣವನ್ನು ತಿರುಗಿತೆಗೆದುಕೊಳ್ಳುತ್ತ ಹೋದರೆ ವರ್ಷಾಂತ್ಯದೊಳಗೆ ಏನಿಲ್ಲೆಂದರೂ ೧೫ ರೂಪಾಯಿಗಳನ್ನಾದರೂ ಬಡ್ಡಿಯರೂಪದಿಂದ ದೊರಕಿಸಬಹುದು. ಈ ಹದಿನೈದು ರೂಪಾಯಿಗಳಂತೆ ಈ ಬಡರೈತರ ಹದಿನೈದು ದಿವಸಗಳ ಉಪ್ಪು, ಮೆಣಸಿನಕಾಯಿಗಳ ಸಾಧನವಾಗಿರುವವು. ಇದನ್ನು ಮನದಲ್ಲಿ ತಂದರೆ ಇದರ ಮಹತ್ವವು ತಿಳಿಯುತ್ತದೆ. ತೆನಿ ತೆನಿ ರಾಶಿ, ಎಂಬ ಗಾದೆಗನುಸರಿಸಿ ಇವರು ನಡೆಯಲಾರಂಭಿಸಿದರೆ ಎಷ್ಟೊಂದು ನಿಧಿಯು ಕೂಡಬೀಳುವದೆಂಬದನ್ನು ನೀವೇ ನಿರ್ಣಯಿಸಿರಿ. ಸದ್ಯದ ಸ್ಥಿತಿಯು ಮಾತ್ರ ನಿರಾಶಾಜನಕ ವಿರುತ್ತದೆ. ಸರಕಾರೀ ರಿಪೋರ್ಟುಗಳ ಮೇಲಿಂದ ನೋಡಲಾಗಿ ಪ್ರತಿಯೊಬ್ಬ ಮೆಂಬರನ ಸರಾಸರಿ ಠೇವು ೬ ರೂಪಾಯಿ ಇರುವದೆಂದು ಕಂಡುಬಂದಿದೆ. ಇದು ಸ್ವಾವಲಂಬನದ ಲಕ್ಷಣವಲ್ಲ. ಪರಸ್ಪರ ಸಹಾಯದ ತತ್ವಕ್ಕೆ ಇದು ಬಿಟ್ಟಿರುವದು. ಇದಕ್ಕೆ ಕಾರಣವೇನಂದರೆ ಸಂಘದ ನಾಯಕರ ಮೇಲೆ ಸಂಘದ ಸಭಾಸದರದೇ ವಿಶ್ವಾಸವಿಲ್ಲ. ಸಹಕಾರೀ ಸಂಘವು ಎರಡನೇದವರದಿರದೆ ತನ್ನದೇ ಇರುವದೆಂಬ ಬಗ್ಗೆ ಗೊತ್ತಿ ಇದ್ದೂ, ಅವಿಶ್ವಾಸವು ಏಕೆ ? ತನ್ನ ವಿಸ್ವಾಸವು ತನ್ನ ಮೇಲೆಯೇ ಇರದೆ ಹೋದರೆ ಎರಡನೇಯವರ ವಿಶ್ವಾಸವು ತನ್ನ ಮೇಲೆ ಕೂಡ್ರುವ ಬಗೆ ಎಂತು ? ಹಣದ ವ್ಯವಹಾರದಲ್ಲಿ ತನ್ನ ಪತ್ತನ್ನು ಹೆಚ್ಚಿಸುವದಿದ್ದಲ್ಲಿ, ತಾನು ಅಲ್ಲಿಯ ಜನರ ಅನುಕರಣವನ್ನು ಮಾಡತಕ್ಕದ್ದು. ಹಣವನ್ನು ಸಂಘದ ಸ್ವಾಧೀನಪಡಿಸುವದರಿಂದ ತನ್ನ ಲಾಭವಂತೂ ಆಗುವದಲ್ಲದೆ ಬೇರೆಯವರಿಗೆ ಉದಾಹರಣೆಯನ್ನು ಹಾಕಿಕೊಟ್ಟಂತೆಯಾಗಿ ಹಳ್ಳಿ ಪಳ್ಳಿಗಳಲ್ಲಿದ್ದ ನಿರೂಪಯೋಗಿ ಹಣವನ್ನು ಕೆಲಸಕ್ಕೆ ಹಚ್ಚಿದಂತಾಗುವದು ಇದುವರೆಗೆ ಹೆಚ್ಚು ಜನರು ಇದರ ಕಡೆಗೆ ಲಕ್ಷ್ಯ

ವನ್ನು ಕೊಟ್ಟಿದ್ದಿಲ್ಲ. ಇನ್ನು ಮಾತ್ರ ಹಾಗೆ ಮಾಡದೆ ಸಂಪೂರ್ಣ ಮನವನ್ನು ಅದರಲ್ಲಿ ತೊಡಗಿಸಿದರೆ ಪ್ರತಿಯೊಂದು ಸಂಘದ ಹತ್ತರ ಅಪರಿಮಿತ ಹಣವು ಕೂಡಿಬೀಳುವದು. ಇದು ತೀರ ಸುಲಭವಿದ್ದು ಸಹಜವಾಗಿ ಆಗತಕ್ಕ ಸಂಗತಿಯಾಗಿದೆ. ಆದರೆ ಅದನ್ನು ದಕ್ಷತೆಯಿಂದ ಮಾತ್ರ ಮಾಡಬೇಕು. ಹಣದ ವ್ಯವಹಾರದ ಬಗ್ಗೆ ಹೇಳುವ ಮತ್ತೊಂದು ಸಂಗತಿಯಂದರೆ-ಸಂಘದ ಆಡಳಿತೆಯನ್ನು ಶಕ್ಯವಾದಷ್ಟು ಮಟ್ಟಿಗೆ ಪತ್ತಿನ ಜೋರನಿಂದಲೇ ಸಾಗಿಸಿ ನಾಣ್ಯದ ಉಪಯೋಗವನ್ನು ಆದಷ್ಟು ಕಡಿಮೆಮಾಡಬೇಕು. ಒಬ್ಬ ವ್ಯಾಪಾರಸ್ಥನು ಇನ್ನೊಬ್ಬ ವ್ಯಾಪಾರಸ್ಥನಿಗೆ ಹಣವನ್ನು ಕೊಡುವದಾದರೆ ಅವನು ಬಹುತರವಾಗಿ ಹಣವನ್ನು ಕೊಡುವದೇ ಇಲ್ಲ. ಕಾಗದದ ತುಣುಕಿನಿಂದಲೇ ಕಾರ್ಯವನ್ನು ಕೊನೆಗಾಣಿಸುವನು. ಇದಕ್ಕೆ ನಾವು ಹುಂಡಿ ಅಥವಾ ನೋಟು ಎಂದೆನ್ನಬಹುದು. ಈ ಕಾಗದ ಕುದುರೆಯು ಬೆಳ್ಳಿ, ಬಂಗಾರಕ್ಕಿಂತ ಕಡಿಮೆ ಖರ್ಚಿನದೂ ಹೆಚ್ಚು ಕೆಲಸದ್ದೂ ಇರುತ್ತದೆ. ಇದನ್ನು ತಿಳಿದುಕೊಂಡೇ ಹಣದ ವ್ಯವಹಾರದಲ್ಲಿ ನಾಣ್ಯಗಳನ್ನು ಬಹುತರ ಉಪಯೋಗಿಸುವದಿಲ್ಲ. ಹಣವೆಂದರೆ ಶ್ರಮವನ್ನು ಅಳೆಯುವ ಅಳತೆ ಎಂದು ಈ ಮೊದಲೇ ಹೇಳಿರುತ್ತದೆ. ಅದನ್ನು ಅಳೆಯುವ ಮಾಪು ಕಾಗದದಿಂದ ಮಾಡಿದರೇನು ಅಥವಾ ಬಂಗಾರದಿಂದ ಮಾಡಿದರೇನು? ಇವೆರಡರಿಂದಲೂ ಕೆಲಸವು ಅಷ್ಟೇ ಆಗುತ್ತದೆ. ಇರಲಿ ಬೆಳ್ಳಿ, ಭಂಗಾರದ ನಾಣ್ಯಗಳ ಬದಲು ಕಾಗದದ ನಾಣ್ಯಗಳನ್ನು ನಡಿಸುವದರಲ್ಲಿ ವ್ಯವಹಾರಸ್ಥರ ಗುಢಾರ್ಥವು ಬೇರೆ ಇರುತ್ತದೆ. ಹಣದ ಭದ್ರತೆಯಂತೂ ಇರುವದಲ್ಲದೆ ಪತ್ತನ್ನು ಹೆಚ್ಚಿಸಿ, ಒಬ್ಬರೊಬ್ಬರ ವಿಸ್ವಾಸವನ್ನು ಹೆಚ್ಚಿಸಿ, ಜನರಲ್ಲಿ ನಿರಂತರ ನಂಬಿಗೆಯನ್ನುಂಟು ಮಾಡುವದು ಅವರಿಗೆ ಹೆಚ್ಚಿಗೆ ಮಹತ್ವದ್ದಿರುತ್ತದೆ.

ನಿರ್ಜೀವವುಳ್ಳ ಸ್ಥಾವರ ವಸ್ತುವಿನಲ್ಲಿರುವ ವಿಶ್ವಾಸಕ್ಕಿಂತ ಸಜೀವ ಮನುಷ್ಯ ಪ್ರಾಣಿಯ ಇಭ್ರುತಿಯ ಪತ್ತಿನ ಮೇಲೆ ಕೆಲಸಮಾ

ಡುವದೇ ಸುಧಾರಣೆಯ ಲಕ್ಷಣವಾಗಿರುವದು; ಇದೇ ವಿಶ್ವಬಂಧುತ್ವದ ಸಾಕ್ಷಿಯಾಗಿದೆ; ಇದೇ ಮನುಷ್ಯರನ್ನು ಏಕೀಕರಿಸುವ ಜೀವಾಳ ವಾಗಿ ರುತ್ತದೆ. ಒಬ್ಬರಮೇಲೊಬ್ಬರ ಮೇಲಿರುವ ವಿಶ್ವಾಸವೇ ವ್ಯಾಪಾರದ ಅಂತರಾತ್ಮವೂ ವ್ಯವಹಾದ ಹೃದ್ಗತವೂ ಆಗಿದೆ. ಯಾವ ದೇಶದಲ್ಲಿ ಇದರ ಪ್ರವೇಶವಾಗಿರುವದಿಲ್ಲವೋ ಅಲ್ಲಿಯ ಕಾರಭಾರಗಳೆಲ್ಲ ಬಾಲ್ಯಾ ವಸ್ಥೆಯಲ್ಲಿರುವವೆಂದು ಹೇಳಬಹುದು; ಅಲ್ಲಿ ವ್ಯವಹಾರದ ಮೇಲಾಟ (competetion) ವಿರದೆ ಜನರ ಏಕೀಕರಣವೂ ಇರುವದಿಲ್ಲ. ನಮ್ಮ ಲ್ಲಿಗಿಂತಲೂ ಪಾಶ್ಚಾತ್ಯ ದೇಶಗಳಲ್ಲಿ ಇದರ ಹೊಳವು ಜನರಿಗೆ ಬಹಳೇ ಆಗಿರುವದು. ಇಂಗ್ಲಂಡದಲ್ಲಿ ನಾಣ್ಯಗಳಿಂದ ಕೊಡಕೊಳ್ಳುವ ವ್ಯವ ಹಾರವನ್ನೇ ಮಾಡುವದಿಲ್ಲೆಂದು ಹೇಳುತ್ತಾರೆ. ತೀರ ಸಾಧಾರಣ ಪ್ರತಿಯ ಮನುಷ್ಯನು ಕೂಡಾ ಮನೆಬಿಟ್ಟು ಹೊರಡುವಾಗ ನಾಣ್ಯಗ ಳನ್ನು ಸಂಗಡ ತೆಗೆದುಕೊಳ್ಳದೆ ತನ್ನ ಬ್ಯಾಂಕಿನ ಚಕ್ಕ ಪುಸ್ತಕವನ್ನು ಒಯ್ಯುವನು. ಕೊಡಕೊಳ್ಳುವದು ಇಷ್ಟೊಂದು ಸುಲಭವಾದ ಮೇಲೆ ಲಕ್ಷ್ಮಿಯು ಪ್ರಸನ್ನಳಾಗುವದಲ್ಲದೆ ಕುಬೇರನು ಸಹಿತ ಅವನಲ್ಲಿ ತನ್ನ ಹಣವನ್ನು ಇಡಲಿಕ್ಕೆ ಓಡಿ ಬರುವದರಲ್ಲೇನು ಆಶ್ಚರ್ಯ ?

ಪುರುಷ ಪ್ರಯತ್ನಕ್ಕೆ ಯಾವದು ತಾನೇ ಅಸಾಧ್ಯವು ? ಆಕಾಶ ವನ್ನು ಭೇದಿಸಿ ಮೇಲೆ ಹೋದಂಥ ಹಿಮಾಲಯ ಪರ್ವತದ ಅತ್ಯಂತ ಉನ್ನತವಾದ ಶಿಖರವನ್ನಾದರೂ ಏರಬಲ್ಲರೆಂದು ಸಪ್ರಮಾಣವಾಗಿ ಸಿದ್ಧಮಾಡಿರುತ್ತಾರೆ. ನೀವು ಕೆಲಸವನ್ನು ಮಾಡುವದಕ್ಕೆ ನಿಶ್ಚಯವ ನ್ನಾದರೂ ಮಾಡಿರಿ ಅಂದರೆ ಎಲ್ಲವು ತಾನೇ ಸಹಜವಾಗಿಯೇ ನೆರವೇ ರುವದು. ಹಿಂದುಸ್ಥಾನದಂಥ ಸುವರ್ಣದ ಕರಡಿಗೆಯಲ್ಲಿರುವ ಒಕ್ಕ ಲಿಗರು ತಾವು ಬಡವರೆಂದು ಹೇಳಿಕೊಳ್ಳುವದರಲ್ಲಿಯೇ ದಿನಗಳು ಕಳೆ ಯಹತ್ತಿರುವವು. ಒಕ್ಕಲಿಗರ ವರ್ಗವು ಹಣದ ದೃಷ್ಟಿಯಿಂದ ಬಡವರಾಗಿರುವದಕ್ಕೆ ಅವರು ಕಾರ್ಯಮಾಡುವದರಲ್ಲಿ ದುರ್ಬಲರಾ

ಗಿರುವದೇ ಮುಖ್ಯ ಕಾರಣವು, ಸಹಕಾರೀ ಚಳವಳಿಯಲ್ಲಿ ಶೇರ್ಪಡೆಯಾಗುವ ಜನರು ಸ್ವಾವಲಂಬನದ ಆಶೆಯನ್ನು ಮಾಡ ತಕ್ಕದ್ದು.

## Central Banks

## ೧೫. ಹಣದ ವ್ಯವಹಾರದ ಅಡತೀ ಅಂಗಡಿಗಳು.

### (ಮಧ್ಯವರ್ತಿ ಬ್ಯಾಂಕುಗಳು)

ಹಣದ ವ್ಯವಹಾರದಲ್ಲಿರುವ ಠೋಕ ಮತ್ತು ಚಿಲ್ಲರೆ ವ್ಯಾಪಾರ ಮತ್ತು ಗಿರಾಕಿಗಳ ಪದ್ಧತಿಯು ನಮಗೆ ಹೊಳೆದಂತಾಯಿತು. ಇದ ನ್ನನುಸರಿಸಿದರೂ ನಮಗೆ ಬೇರೊಂದು ಸಾಧನದ ಅವಶ್ಯಕತೆಯುಂಟಾ ಗುವದು. ಆ ಸಾಧನವನ್ನು ನಾವು ಸಧ್ಯಡ ಮಾಡಿದರೆ ನಮ್ಮ ಕೆಲ ಸವು ಸುಲಭವಾಗುವದು ನಮಗೆ ಒಂದುವರ್ಷದಲ್ಲಿ ಸರಾಸರಿ ೮-೧೦ ಸಾರೆಯಾದರೂ ಹತ್ತಿಯ ಮಾರ್ಕೇಟ್ಟಿಗೆ ಹೋಗುವ ಪ್ರಸಂಗವು ಬರುವದು. ಅಲ್ಲಿ ಹೋದನಂತರ ಒಬ್ಬಾನೊಬ್ಬ ಮನುಷ್ಯನು ನಮ್ಮ ಬೆನ್ನಕಾಯುವನು; ಮತ್ತು ನಮಗಾದರೂ ಅವನ ಅವಶ್ಯಕತೆಯೆನಿಸು ವದು. ಅವನಂದರೆ ಅಡತಿಗಾರ ಅಥವಾ ದಲಾಲನು. ಅಡತಿಗಾರ ರಿಲ್ಲದ ಮಾರ್ಕೇಟು ಇಲ್ಲವೇ ಇಲ್ಲ. ಅವರ ವಿನಹ ಯಾವ ಯಾವ ವ್ಯವಹಾರವೂ ಸಾಗುವಂತಿಲ್ಲ. ಈ ತರಹದ ವ್ಯವಹಾರದಲ್ಲಿ ಹೇಗೆ ಅಡತಿಗಾರರಿರುವರೋ ಅದರಂತೆ ಹಣದ ವ್ಯವಹಾರದಲ್ಲಿ ಕೂಡಾ ಇರುವರು. ಅಡತಿಗಾರರೆಂದರೆ ಮಧ್ಯಸ್ಥಿಗಾರರು. ವ್ಯವಹಾರವೆಲ್ಲ ಇವರ ಚಾತುರ್ಯವನ್ನೇ ಅವಲಂಭಿಸಿರುವದು. ಸಹಕಾರೀ ಚಳವ ಳಿಯಲ್ಲಿ ಮಧ್ಯಸ್ಥಿಕೆಯ ಅಂಗಡಿಗಳೆಂದರೆ ಸೆಂಟ್ರಲ್ ಮತ್ತು ಇಲಾಖಾ ಬ್ಯಾಂಕುಗಳು. ಎಷ್ಟೋ ಜನರು ಸರಕಾರವು ತಮಗೆ ಹಣವನ್ನು ಕೊಡುವದೆಂದು ನಂಬುತ್ತಾರೆ. ಆದರೆ ಇದು ತೀರ ತಪ್ಪು

ಬಡ ವಕ್ಕಲಿಗರ ಉದ್ಧಾರದ ಸಲುವಾಗಿ ಸರಕಾರವು ಇದಕ್ಕೆ ಸಹಾಯ ಮಾಡುವದು ಮಾತ್ರ ನಿಜವಿರುತ್ತದೆ. ಆದರೆ ಸರಕಾರದ ಸಹಾಯವನ್ನು ಆದಷ್ಟು ಕಡಿಮೆ ತೆಗೆದುಕೊಳ್ಳುವದು ನಮ್ಮ ಕೈಯ್ಯಲ್ಲಿಯೇ ಇರುತ್ತದೆ. ನಡೆಯಲು ಬಾರದಂತಹ ಮಗುವಿಗೆ ನಡೆಯಲಿಕ್ಕೆ ಬರುವ ವರೆಗೆ ಮಾತ್ರ ಗಾಡಿಯನ್ನು ಕೊಡುವರು. ಆ ಮೇಲೆ ಕೊಟ್ಟರೆ ಶೋಭಿಸುವದಿಲ್ಲ. ನಮಗೆ ಎಲ್ಲಿಯವರೆಗೆ ಸಹಕಾರೀ ಚಳವಳಿಯ ಸಂಪೂರ್ಣಜ್ಞಾನ ವಿರುವದಿಲ್ಲವೋ ಅಲ್ಲಿಯವರೆಗೆ ಸರಕಾರವು ನಮಗೆ ಸಹಾಯಮಾಡುವದು ಯೋಗ್ಯವಾದದ್ದು. ಆ ಮೇಲೆ ಸಹ ಸಹಾಯನ್ನಪೇಕ್ಷಿಸುವದೆಂದರೆ ನಮ್ಮ ಮೂಲ ತತ್ವವನ್ನು ಮರೆತಂತೆಯೇ ಸರಿ. ನಾವು ಸ್ವಾವಲಂಬನದ ಬಲದಿಂದಲೇ ಯಾವತ್ತೂ ಕಾರ್ಯಗಳನ್ನು ಮಾಡುವವರಿದ್ದೇವೆ. ಸರಕಾರದ ಅಥವಾ ಬೇರೊಬ್ಬರ ಸಹಾಯವನ್ನು ನೋಡುವದು ನಮ್ಮ ತತ್ವಕ್ಕೆ ವಿರುದ್ಧವಾಗಿರುತ್ತದೆ. ಸಹಕಾರೀ ಚಳವಳಿಯೊಳಗಿನ ಹಣವು ಸರಕಾರದ್ದಲ್ಲ. ಅದನ್ನು ಸಹಕಾರೀ ಬಂಧಗಳು ತಮ್ಮ ಹತ್ತರಿರುವ ಮತ್ತು ತಮ್ಮ ಪತ್ತಿನಿಂದ ಎರಡನೇಯವರ ಕಡೆಯಿಂದ ತಂದಂಥ ಹಣವಿರುತ್ತದೆ ಸಹಕಾರೀ ಚಳವಳಿಯ ಸಲುವಾಗಿ ಅವಶ್ಯವಾದ ಹಣದ ಕೊಡಕೊಳ್ಳುವ ವ್ಯವಹಾರವನ್ನು ಮಾಡುವ ಮುಖ್ಯ ಅಡತಿ ಅಂಗಡಿಗಳೆಂದರೆ ನಮ್ಮ ಇಲಾಖಾ ಬ್ಯಾಂಕುಗಳು.

ಹಣದ ವ್ಯವಹಾರದಲ್ಲಿ ದೊಡ್ಡ ಪ್ರಮಾಣದ ಮೇಲೆ ಕೊಡಕೊಳ್ಳುವ ವ್ಯವಹಾರವನ್ನು ಪ್ರಾಮುಖ್ಯವಾಗಿ ಇಲಾಖಾ ಬ್ಯಾಂಕುಗಳೇ ಮಾಡುತ್ತವೆ; ಆದರೆ ಹೆಚ್ಚು ಕಡಿಮೆ ಪ್ರಮಾಣದಿಂದ ಈ ಕಾರ್ಯವನ್ನು ಸೆಂಟ್ರಲ್ ಬ್ಯಾಂಕುಗಳಾದರೂ ಮಾಡುತ್ತವೆ. ಸಹಕಾರೀ ಸಂಘಗಳಿಗೆ ಹಣವನ್ನು ಪೂರೈಸಿಕೊಡುವ ಮುಖ್ಯ ಕಾರ್ಯವನ್ನು ಸೆಂಟ್ರಲ್ ಬ್ಯಾಂಕುಗಳು ಮಾಡುತ್ತವೆ. ಈ ಬ್ಯಾಂಕುಗಳು

ಎರಡನೇ ಬ್ಯಾಂಕುಗಳಂತೆ ಭಾಂಡವಲದಿಂದಲೂ, ಠೇವಿನಿಂದಲೂ ತಮ್ಮ ವ್ಯವಹಾರಿಕ ಭಾಂಡವಲವನ್ನು ಸಿದ್ಧಪಡಿಸುವವು. ಭಾಂಡವಲದ ಮುಖ್ಯ ಪ್ರಕಾರಗಳು ಮೂರು ಇರುತ್ತವೆ.

(೧) ಸಂಕಲ್ಪಿತ ಭಾಂಡವಲ:— (Authorised Capital) ಬ್ಯಾಂಕುಗಳನ್ನು ಸ್ಥಾಪಿಸುವ ಕಾಲಕ್ಕೆ ಅಥವಾ ಹಿಂದಿನಿಂದ ಅವುಗಳ ಭಾಗ (Shares) ಗಳನ್ನು ಮಾರಿ ಬಂದ ಹಣಕ್ಕೆ ಸಂಕಲ್ಪಿತ ಭಾಂಡವಲವೆಂದೆನ್ನುವರು.

(೨) ವಸೂಲಾದ ಭಾಂಡವಲ:— ( Paid-up Capital ) ಸಂಕಲ್ಪಿತ ಭಾಂಡವಲದೊಳಗಿಂದ ಶೇರುಗಳನ್ನು ಮಾರಿ ಬಂದ ಮೂಲ ಹಣಕ್ಕೆ ವಸೂಲಾದ ಭಾಂಡವಲವೆನ್ನುವರು.

(೩) ವ್ಯಾವಹಾರಿಕ ಭಾಂಡವಾಲ:- (Working Capital) ವಸೂಲ ಭಾಂಡವಲ ಮತ್ತು, ಜನರಿಂದ ಠೇವಿನ ರೂಪದಿಂದಾಗಲಿ, ಸಾಲದ ರೂಪದಿಂದಾಗಲೀ ವರ್ಷದ ಮಟ್ಟಿಗೆ ಎಷ್ಟು ಹಣವನ್ನು ಮಂಜೂರ ಮಾಡುವದರಲ್ಲಿ ಬರುವದೋ ಅದಕ್ಕೆ ಅಥವಾ ಮರ್ಯಾದೆಗೆ ವ್ಯವಹಾರಿಕ ಭಾಂಡವಲವೆಂದೆನ್ನುವರು.

ನಮ್ಮ ಹಿಂದುಸ್ಥಾನದಲ್ಲಿ ವಸೂಲ ಮಾಡಿದ ಭಾಂಡವಲ ಮತ್ತು ವ್ಯಾವಹಾರಿಕ ಭಾಂಡವಲ ಇವುಗಳ ಪ್ರಮಾಣವು ೧ ಕ್ಕೆ ೧೧ ಇರುವದು. ಸ್ವಂತ ಮನೆಯಿಂದ ಒಂದು ದುಡ್ಡನ್ನು ಉಪಯೋಗಿಸಿದರೆ ಹೊರಗಿನ ಹನ್ನೊಂದು ದುಡ್ಡುಗಳನ್ನು ಉಪಯೋಗಿಸುವೆವು. ಅದರ ಮೇಲಿಂದ ನೋಡಲಾಗಿ ನಮ್ಮ ಮಧ್ಯಸ್ಥಿಕೆಯ ಅಂಗಡಿಗಳು (Central Banks) ಜನರ ನಂಬಿಗೆಗೆ ಪಾತ್ರವಾಗುತ್ತ ನಡೆದಿರುತ್ತವೆಂದು ಕಂಡುಬರುತ್ತದೆ.

ಕಳೆದ ಹಲವು ವರುಷಗಳ ಅನುಭವದಿಂದ ಹೊಳೆದ ಸಂಗತಿ ಎಂದರೆ, ಜನರು ತಮ್ಮ ಪ್ರಪಂಚಕ್ಕೆ ಚಾಲತೀ ಖರ್ಚಿಗಾಗಿ ತೆಗೆದು ಕೊಂಡ ಸಾಲದ ಹಣವನ್ನು ವೇಳೆಗೆ ಸರಿಯಾಗಿ ತಿರುಗಿ ಕೊಡುವದಿಲ್ಲ ವಾದ್ದರಿಂದ ಸಾಲ ತೆಗೆದುಕೊಳ್ಳುವ ರಕಮು ಉಬ್ಬುತ್ತ ನಡೆದಿರುವದು ಸಭಾಸದರಲ್ಲಿ ಇರಬೇಕಾದಷ್ಟು ಸ್ವಾವಲಂಬನವೂ ಕಾಟು ಕಸರುತ ನವೂ ಇರುವದಿಲ್ಲ. ಇದರಿಂದ ಹಣದ ವ್ಯವಹಾರದಲ್ಲಿ ಸೆಂಟ್ರಲ್ ಬ್ಯಾಂಕುಗಳಿಗೆ ಸ್ವಲ್ಪ ತೊಂದರೆ ಹೋಗುತ್ತದೆ. ತಂದ ಸಾಲವನ್ನು ಮುದ್ದತಿಗೆ ಸರಿಯಾಗಿ ಕೊಟ್ಟರೆ ತಮ್ಮ ಮೈಮೇಲಿನ ಭಾರವು ಇಳಿ ದಂತಾಗುವದಲ್ಲದೆ ಬ್ಯಾಂಕಿನ ಪತ್ತು ಬೆಳೆದು ಅದಕ್ಕೆ ಬೇರೆ ಕಡೆ ಯಿಂದ ಕಡಿಮೆ ಬಡ್ಡಿಯಿಂದ ಸಾಲ ಅಥವಾ ಠೇವು ದೊರಕುವದು. ಬ್ಯಾಂಕಿಗೆ ಕಡಿಮೆ ಬಡ್ಡಿಯಿಂದ ಸಾಲ ದೊರೆತರೆ ನಮಗೂ ಕಡಿಮೆ ಬಡ್ಡಿಯಿಂದ ಸಾಲ ದೊರೆಯುವದೆಂಬದನ್ನು ಲಕ್ಷ್ಯದಲ್ಲಿಡತಕ್ಕ ಮಾತಾ ಗಿದೆ. ಯಾವ ಸಭಾಸದನು ನಿಯಮಗಳನ್ನು ಉಲ್ಲಂಘಿಸುವನೋ ಅವನು ತನ್ನ ಹಾನಿಯನ್ನು ಮಾಡಿಕೊಳ್ಳುವದಲ್ಲದೆ ತನ್ನ ಸಂಗಡ ಬೇರೆ ಯವರದೂ ಮಾಡುತ್ತಾನೆ. ಜನರು ಸಾಲವಾಗಿ ತಕ್ಕೊಂಡ ಹಣದ ಉಪಯೋಗವನ್ನು ಯೋಗ್ಯ ರೀತಿಯಿಂದ ಮಾಡುವರೋ ಹೇಗೆಂಬ ದರ ಬಗ್ಗೆ ಬ್ಯಾಂಕಿನ ಇನ್ಸ್‌ಪೆಕ್ಟರರೂ, ಚಾಲಕರೂ ಇನ್ನುಳಿದ ಸಹಕಾರೀ ಮುಂದಾಳುಗಳೂ ಪದೇ ಪದೇ ಉಪದೇಶಿಸಬೇಕು. ಇದ ಕ್ಕೆಲ್ಲಾ ಹಣವು ಬೇಕು. ದುಡಿಯುವ ಭಾಂಡವಲದ ಮೇಲಿಂದ ನೋಡಲಾಗಿ ಈ ವೆಚ್ಚವಾಗುವ ಹಣವು ೧೦೦ ರೂಪಾಯಿಗಳಿಗೆ ೮ ಆಣೆಯನ್ನು ಸಹ ಮೀರುವದಿಲ್ಲ. ಈ ಪರಿ ಅತ್ಯಲ್ಪ ಖರ್ಚಿನಿಂದ ಇಷ್ಟೊಂದು ಜವಾಬದಾರಿಯ ಕೆಲಸವನ್ನು ಬೇರೆ ಪ್ರಕಾರದ ಮತ್ಯಾವ ಸಂಸ್ಥೆಗಳೂ ನಡೆಯುವದಿಲ್ಲ. ಇದರ ಎಲ್ಲ ಶ್ರೇಯಸ್ಸು ಈ ಚಳ ವಳಿಯಲ್ಲಿ ಕೇವಲ ಪರೋಪಕಾರ ಬುದ್ಧಿಯಿಂದಲೂ, ಬಿನ್-ಬೊಬ್ಬಾ ಟದಿಂದಲೂ ಒಂದು ಕಾಶಿನ ಅಭಿಲಾಷೆಯನ್ನು ಸಹ ಹಿಡಿಯದೆ ಕೆಲಸ

ಮಾಡುವ ಬ್ಯಾಂಕಿನ ಸಭಾಸದರ ಕಡೆಗೂ ಚಾಲಕರ (Directors) ಕಡೆಗೂ ಇರುವದೂ. ನಮಗೆ ಹಣದ ವ್ಯವಹಾರದಲ್ಲಿ ಬ್ಯಾಂಕಿನ ಪತ್ತನ್ನು ಹೆಚ್ಚಿಗೆ ಬೆಳಿಸುವದಿದ್ದಲ್ಲಿ ಅದರ ಮ್ಯಾನೇಜರನು, ಉತ್ಸಾಹಿಯೂ, ಕಳಕಳಿಯುಳ್ಳವನೂ, ಬಲ್ಲವನೂ ಇರಬೇಕೆಂದು ಒಡೆದು ಹೇಳಲವಶ್ಯವಿಲ್ಲ. ಹೆಚ್ಚು ಯೋಗ್ಯ, ಹೆಚ್ಚು ಹುದ್ದೆಯ ಹೆಚ್ಚು ಪಗಾರದ ಮ್ಯಾನೇಜರನನ್ನು ಬ್ಯಾಂಕುಗಳಲ್ಲಿ ನಿಯಮಿಸಿದರೆ, ಕೊಡ ಕೊಳ್ಳುವದು ಬೆಳೆದು. ವ್ಯವಹಾರಕ್ಕೆ ಕಳೆ ಏರಿ, ಸಹಕಾರೀ ಚಳವಳಿಗೆ ಹೊಸ ಹುರುಪು ಬರುವದು, ಮತ್ತು ಅವರು ನಮ್ಮ ಲಾಭವನ್ನೇ ಚಿಂತಿಸುವರು. ಅದರಂತೆ ಬ್ಯಾಂಕಿನ ಇತರ ಕಾಮಗಾರರು ಸಹ ಸಹಕಾರೀ ತತ್ವಗಳಿಂದ ನೆನೆದಿರಬೇಕು

ಹಣವನ್ನು ಠೇವಾಗಿ ಇಟ್ಟ ಜನರು ೧೦೦ ಕ್ಕೆ ೩೩ ರಂತೆ ತಿರುಗಿ ತೆಗೆದುಕೊಳ್ಳುವರೆಂದು ಅನುಭವದಿಂದ ಕಂಡುಬಂದ ಸಂಗತಿಯಾಗಿದೆ. ಉಳಿನಿಧಿಯನ್ನು ತೆಗೆದಿಡುವ ಮೂಲಕ ಠೇವಿನದರವು ೪—೬ ರಂತೆ ಕಂಡರೂ ಅದು ಉಪಯೋಗದ ಮಾನದಿಂದ ೭ ರಂತೆ ಬೀಳುವದು. ಸಹಕಾರೀ ಸಂಘಗಳಿಗೆ ಕಡಿಮೆ ಬಡ್ಡಿಯಿಂದ ಸಾಲದೊರೆಯಬೇಕಾದರೆ ಸೆಂಟ್ರಲ್ ಬ್ಯಾಂಕಿಗೆ ಹಣವನ್ನು ಕಡಿಮೆ ಬಡ್ಡಿಯ ದರದಿಂದ ದೊರಕಿಸಬೇಕೆಂಬುದನ್ನು ಬೇರೆ ಹೇಳಲು ಕಾರಣವಿಲ್ಲ. ಸೆಂಟ್ರಲ್ ಬ್ಯಾಂಕಿನವರು ೪ರಂತೆ ಠೇವು ತೆಗೆದುಕೊಂಡರೆ ಅವರಿಗೆ ತಮ್ಮ ಯಾವತ್ತು ವೆಚ್ಚವನ್ನು ನೀಗಿಸಿಕೊಂಡು ೫-೬ ರಂತೆ ಸಾಲ ಕೊಡಲಿಕ್ಕೆ ಪೂರೈಸುತ್ತದೆ. ಒಟ್ಟಾರೆ ಹೇಳುವ ಗುಟ್ಟಿನ ಮಾತಂದರೆ ಠೇವಿನ ದರವನ್ನು ಕಡಿಮೆ ಮಾಡದ ಹೊರತು ಸಂಘಗಳಿಗೆ. ಕಡಿಮೆ ದರದಿಂದ ಸಾಲ ಸಿಗುವದು ಶಕ್ಯವಿಲ್ಲ. ಆದ್ದರಿಂದ ಪ್ರತಿಯೊಬ್ಬ ಸುಶಿಕ್ಷಿತನು ಆದಷ್ಟು ಪ್ರಯತ್ನಮಾಡಿ ಜನರಲ್ಲಿ ಸಹಕಾರೀ ಚಳವಳಿಯನ್ನು ಪ್ರಸಾರಮಾಡಿ ಅದರ ಮುಖಾಂತರ ಬ್ಯಾಂಕಿಗೆ ಹಣವನ್ನು ಕೂಡಿಸಬೇಕು. ಸಹಕಾರವೇ ನಮ್ಮ ಧರ್ಮವಾಗಿರುತ್ತದೆ. ಇದನ್ನು

ಪ್ರಸಾರವಾಡುವ ಜವಾಬದಾರಿಯು ನಮ್ಮ ಮೇಲೆ ಇರುತ್ತದೆ. ಸಾವು ಮನೆ ಮನೆಗೆ ಹೋಗಬೇಕು; ಅವರಿಗೆ ಭೆಟ್ಟಿಯಾಗಬೇಕು; ಸಾವು ಕಾರ-ಸಾಲಗಾರನಿಗೂ, ಹೊಲಮಾಡುವವನಿಗೂ, - ಹೊಲದೊಡೆಯ ನಿಗೂ, ಕೂಲಿಕಾರರಿಗೂ, ಶ್ರೀಮಂತರಿಗೂ, ಅವರವರ ಹಿತಸಂಬಂಧ ಗಳಲ್ಲಿರತಕ್ಕ ವಿರೋಧಾತ್ಮಕವಾದ ವ್ಯತ್ಯಾಸವನ್ನು ಇಲ್ಲದಂತೆ ಮಾಡಿ ಇಹಲೋಕದಲ್ಲಿ ಇಬ್ಬರಿಗೂ ಯಾವರೀತಿಯಿಂದ ಸುಖವಾಗಿ ಜೀವಿ ಸಲಿಕ್ಕೆ ಬರುತ್ತದೆಂಬುದನ್ನು ನಿದರ್ಶನಕ್ಕೆ ತಂದು ಕೊಡುವದು ಸಹಕಾರೀ ಚಳವಳಿಯ ಧರ್ಮವಾಗಿರುತ್ತದೆ. ಇದು ಯಾವ ಧರ್ಮ ದವರಿಗೂ ಅಡ್ಡ ಬರದೆ, ಯಾರಿಗೂ ಒಂದು ಕಾಸು ಸಹ ಹಾನಿ ಮಾಡದೆ, ತಮ್ಮ ತಮ್ಮ ಉದ್ಯೋಗವನ್ನು ಒಮ್ಮನಸಿನಿಂದ ಜೋರಿ ನಿಂದ ೮-೧೦ ಪಟ್ಟು ಹೇಗೆ ಹೆಚ್ಚಿಸಬೇಕೆಂಬುದನ್ನು ಕಲಿಸಿಕೊಡು ತ್ತದೆ. ಈ ಧರ್ಮಕ್ಕೆ ಜಾತಿಯಿಲ್ಲ; ಕುಲವಿಲ್ಲ; ಗೋತ್ರವಿಲ್ಲ; ಈ ಧರ್ಮದಲ್ಲಿರುವವನು ಯಾವತ್ತೂ ಧರ್ಮದಲ್ಲಿರತಕ್ಕ ದೇವರ ಭಕ್ತನು. ಸರ್ವ ಧರ್ಮಗಳ ಮೂಲಾಧಾರವಾದ ಪರೋಪಕಾರದ ಪ್ರಚಾರ ಕ್ಕಾಗಿಯೇ ನಾವು ಸಂಘಗಳನ್ನು ಹೊರಡಿಸುತ್ತೇವೆ; ಬ್ಯಾಂಕುಗ ಳನ್ನು ಸ್ಥಾಪಿಸುತ್ತೇವೆ; ಮತ್ತು ಪ್ರತಿಯೊಂದು ಬಾಬಿನಲ್ಲಿ ಒಬ್ಬನ ಹಿತವನ್ನೇ ನೋಡದೆ ಎಲ್ಲರ ಹಿತವನ್ನು ನೋಡಲಿಕ್ಕೆ ಪ್ರಯತ್ನ ಪಡುತ್ತೇವೆ.

ಸಂಘದ ನಾಯಕರೂ ಸಭಾಸದರೂ ಸಾಲತಂದ ಹಣದ ಉಪ ಯೋಗವನ್ನು ಹೇಗೆ ಮಾಡಬೇಕೆಂಬುದರ ಗೊಂದಲದಲ್ಲಿ ಬೀಳು ವರು. ಸೆಂಟ್ರಲ್ ಬ್ಯಾಂಕಿನಿಂದ ಹಣವನ್ನು ತಂದು ಮೆಂಬರರಲ್ಲಿ ಹಂಚುವದು ಮಾತ್ರ ನಮ್ಮ ಕರ್ತವ್ಯವೆಂದು ತಿಳಿಯುವರು. ಆದರೆ ಹೀಗೆ ತಿಳಿಯದೆ ಬಹಳ ಸೂಕ್ಷ್ಮ ವಿಚಾರಮಾಡಿ ಹಣವನ್ನು ವಿನಿ ಯೋಗಿಸಬೇಕು. ಪತ್ತಿನ ಸಂಘವು ಹಳ್ಳಿಯ ಬ್ಯಾಂಕಿನಂತಿರುತ್ತದೆ.

ಇದರ ಮುಖಾಂತರ ಹಳ್ಳಿಯ ಜನರಿಗೆ ಹಣವು ಸುಲಭರೀತಿಯಿಂದ ಸಾಲವಾಗಿ ದೊರೆಯುವ ಯೋಜನೆಯುಂಟಾಗಿರುತ್ತದೆ. ಇದರಂತೆ ಸಾವುಕಾರರ ಕಡೆಯಿಂದ ಹಣವನ್ನು ಠೇವಿನ ರೂಪದಿಂದ ಇಟ್ಟು ಕೊಂಡು, ಹುಟ್ಟುವಳಿಯ ಕೆಲಸಕ್ಕೇನೆ ಉಪಯೋಗಿಸುವ ಮೆಂಬರ ಸಿಗೆ ಸಾಲಕೊಟ್ಟು ಲಾಭಮಾಡಿಕೊಳ್ಳಬೇಕೆಂದು ಈ ಹಳ್ಳಿಯ ಬ್ಯಾಂಕಿನ ಉದ್ದೇಶವು. ಅನೇಕ ಶಾಲೆಗಳ ಮುಖಾಂತರ ವ್ಯವಹಾರ ಗಳಿಗೆ ಹಣ ಪೂರೈಸಿಕೊಟ್ಟು ಬಡಜನರನ್ನು ಶ್ರೀಮಂತರನ್ನಾಗಿ ಮಾಡುವದು ಈ ಹಳ್ಳಿಯ ಸಂಘದ ಪವಿತ್ರಕರ್ಮವಾಗಿದೆ. ಮಧ್ಯ ವರ್ತಿ ಬ್ಯಾಂಕಿನ ಶಾಖೆಗಳಂತಿರುವ ಈ ಹಳ್ಳಿಯ ಸಂಘಗಳು ಮುದ್ದತೀ ಅಥವಾ ಚಾಲತೀ ಠೇವಿನ ಹಣವು ದೊರೆತಂತೆ ಮೆಂಬರ ಜನರಲ್ಲಿ ಹಂಚಿದರೆ, ಅವರಲ್ಲಿ ವಿಶ್ವಾಸ ಹುಟ್ಟುತ್ತದೆ.

## Provincial Co-operative Bank

### ೧೬ ಇಲಾಖಾ ಮಧ್ಯವರ್ತಿ ಬ್ಯಾಂಕ.

ನಮ್ಮಲ್ಲಿರುವ ಸಣ್ಣ ಸಣ್ಣ ದಲಾಲರು ಇಲಾಖೆಯ ಕೇಂದ್ರ ಸ್ಥಳದಲ್ಲಿರುವ ದೊಡ್ಡ ದೊಡ್ಡ ದಲಾಲರು ವ್ಯವಹಾರಮಾಡುವಂತೆ ಜಿಲ್ಹಾ ಮಧ್ಯವರ್ತಿ ಸಂಘಗಳ ಮುಖಾಂತರ ಅಡತಿಯ ಕೆಲಸವನ್ನು ಮಾಡುವದಕ್ಕೋಸ್ಕರ ಇಲಾಖಾ ಮಧ್ಯವರ್ತಿಯ ಬ್ಯಾಂಕುಗಳು ಸ್ಥಾಪಿಸಲ್ಪಟ್ಟಿರುವವು. ಸಹಕಾರೀ ಚಳವಳಿಗೆ ಹಣವನ್ನು ಪೂರೈಸು ವದಕ್ಕಾಗಿಯೂ, ಅದರ ವ್ಯವಹಾರವನ್ನು ಅಭಿವೃದ್ಧಿಗೆ ತರುವದಕ್ಕಾ ಗಿಯೂ ಈ ಬ್ಯಾಂಕುಗಳು ಪ್ರಯತ್ನಿಸುತ್ತಿರುವವು. ದೇಶದ ಸಾಂಪ ತ್ತಿಕ ಸ್ಥಿತಿಯನ್ನು ಹೆಚ್ಚಿಸಲಿಕ್ಕೆ ಇವು ಬಹಳೇ ಅನುಕೂಲವಾಗಿವೆ. ತುಸು ದಿವಸಗಳಲ್ಲಿಯೇ ಇವು ಇಲಾಖೆಗಳ ಖಜಾನೆಯ ಕೇಂದ್ರವಾ ಗುವದರಲ್ಲಿ ಸಂಶಯವಿಲ್ಲ.

ಸದ್ಯಕ್ಕೆ ಒಕ್ಕಲಿಗನು ಅಜ್ಞಾನದಿಂದ ನಾಣ್ಯಗಳನ್ನೇ ಪ್ರೀತಿಸುತ್ತಾನೆ. ತನ್ನ ಕಾಳುಕಡಿಗಳಿಗೆ ಪ್ರತಿಯಾಗಿ ನಾಣ್ಯಗಳೇ ದೊರೆಯಬೇಕೆಂದು ಆತುರಪಡುತ್ತಾನೆ. ಯಾಕಂದರೆ ಅದು ನೆಲದಲ್ಲಿ ಬಚ್ಚಿಡಲು ಸುಲವಾದ ಪದಾರ್ಥವೆಂದು ಅವನು ತಿಳಿಯುತ್ತಾನೆ ಆದರೆ ಈ ತಿಳುವಳಿಕೆಯು ಕಡಿಮೆಯಾಗಹತ್ತಿ ಕೆಲವು ದಿವಸಗಳಲ್ಲಿ ಪೂರ್ಣವಾಗಿ ಇಲ್ಲದಂತಾಗುವದು. ವ್ಯಾಪಾರಸ್ಥರೂ ಸಾವುಕಾರರೂ, ರೈತರೂ ತಮ್ಮ ತಮ್ಮ ಹಳ್ಳಿಯ ಸಂಘಗಳಲ್ಲಾಗಲಿ, ಸೆಂಟ್ರಲ್ ಬ್ಯಾಂಕುಗಳಲ್ಲಾಗಲಿ ಠೇವು ಇಡಲಿಕ್ಕೆ ಆರಂಭಿಸಿದರೆ ವ್ಯವಹಾರಕ್ಕೆ ಬಹಳೇ ಅನುಕೂಲವಾಗುವದು. ಇಲಾಖಾ ಬ್ಯಾಂಕಿನ ಚಲನುಗಳ ಮುಖಾಂತರ ಎಲ್ಲಿ ಬೇಕಾದಲ್ಲಿ ವ್ಯವಹಾರಮಾಡಲು ಬರುವದು. ಆಕಾರದಿಂದ ಅಲ್ಪವಾಗಿದ್ದು, ಕೊಡಕೊಳ್ಳಲಿಕ್ಕೆ ಸುಲಭವಾದ ಮತ್ತು ಕಳ್ಳರಿಂದ ಸಂರಕ್ಷಿಸಬಹುದಾದ ಹುಂಡಿಯ ಪ್ರಸಾರವನ್ನು ಆದಷ್ಟು ಜೋರಿನಿಂದ ಮಾಡಲು ಮಧ್ಯವರ್ತಿ ಬ್ಯಾಂಕುಗಳು ವಿಶ್ವಪ್ರಯತ್ನವನ್ನು ಮಾಡತಕ್ಕದ್ದು ಇನ್ನು ಹತ್ತು ಹದಿನೈದು ವರುಷಗಳಲ್ಲಿ ವ್ಯಾಪಾರಕ್ಕಾಗಿ ಶಹರವಾಸಿಗಳು ಹಳ್ಳಿ ಹಳ್ಳಿಗೆ ರೋಖ ನಾಣ್ಯಗಳನ್ನು ಹೇರಿಕೊಂಡು ಹೋಗುವ ಪ್ರಸಂಗಬಾರದೆ ಪ್ರಾಂತಿಕ ಬ್ಯಾಂಕುಗಳ ದ್ವಾರ ಹಣದ ವ್ಯವಸ್ಥೆಯನ್ನು ಮಾಡಿಕೊಂಡು ನೋಟಿನಿಂದಾಗಲಿ, ಚಕ್ಕುಗಳಿಂದಾಗಲಿ ತಮ್ಮ ವ್ಯವಹಾರವನ್ನು ಸಾಗಿಸಬಹುದು. ಇದು ಸಂಪೂರ್ಣವಾಗಿ ಅಮಲಿನಲ್ಲಿ ಬರಬೇಕಾದರೆ ಸಹಕಾರೀ ಚಳವಳಿಯ ವಿಸ್ತಾರವು ಘನವಾಗಿ ಆಗಬೇಕು. ಈ ಚಳವಳಿಯ ಪ್ರಸಾರವೆಂದರೆ ಹಣದ ಕೂಡುವಿಕೆಯು. ಸದ್ಯಕ್ಕೆ ಇಲಾಖಾ ಬ್ಯಾಂಕುಗಳಲ್ಲಿ ಹಣವು ಬಹಳೇ ಕೂಡಹತ್ತಿರುವ ಮೂಲಕ ಹಣದ ಉಪಯೋಗವಿಲ್ಲದಂತಾಗಿ ಬಡ್ಡೀದರವು ಕಡಿಮೆಯಾಗಹತ್ತಿರುವದೊಂದು ಶುಭಚಿನ್ನವೆಂದೇ ತಿಳಿಯಬೇಕು.

ಬರಗಾಲದಲ್ಲಾಗಲಿ ಅಥವಾ ಮತ್ತ್ಯಾವಕಾರಣದಿಂದಾಗಲಿ ಒಕ್ಕಲಿಗರಿಗೆ ಬೆಳೆ ಬಾರದಿದ್ದರೆ ಅವರು ಸಾಲವನ್ನು ತೀರಿಸಲಿಕ್ಕೆ ಸಮರ್ಥ

ರಾಗುವದಿಲ್ಲ. ವೇಳೆಗೆ ಸರಿಯಾಗಿ ಅವರು ಹಣ ತಂದು ಮುಟ್ಟಿಸ ಲಾರರು. ಇದಲ್ಲದೆ ತಮ್ಮ ಅಡಚಣಿಗಳನ್ನು ಸಾಗಿಸಿಕೊಳ್ಳುವದಕ್ಕಾಗಿ ಮತ್ತೆ ಸಾಲಗೊಯ್ಯಕರಾಗುತ್ತಾರೆ. ಇತ್ತಿತ್ತಲಾಗಿ ಕೆಲವು ಭಾಗಗ ಳಲ್ಲಿ ಸಾಧಾರಣವಾಗಿ ಮೂರು ವರುಷಕ್ಕೊಮ್ಮೆ ಬರಗಾಲದ ಪೆಟ್ಟು ಬಿದ್ದೇ ಬೀಳಹತ್ತಿದೆ. ಆದ್ದರಿಂದ ಹಣದ ಅವಶ್ಯಕತೆ ಇದ್ದಾಗ ಮೆಂಬರರಿಗೆ ಯೋಗ್ಯ ಬಡ್ಡೀ ದರದಿಂದ ಹಣ ಕೊಡುವಂತೆ ಮತ್ತು ಹಣವು ಹೆಚ್ಚಾದಲ್ಲಿ ಬ್ಯಾಂಕಿನಲ್ಲಿಟ್ಟು ಎರಡನೇ ಯಾವದಾದರೊಂದು ಹುಟ್ಟುವಳಿಯ ಕೆಲಸಕ್ಕೆ ಉಪಯೋಗ ಬೀಳುವಂತೆ ಮಾಡುವದು ಬಹಳ ಅವಶ್ಯವಾಗಿದೆ. ಬ್ಯಾಂಕುಗಳ ಮುಖಾಂತರ ಹಣದ ವ್ಯವಹಾ ರವನ್ನು ಮಾಡುವದು ಲಾಭದಾಯಕವು. ಈ ವ್ಯವಹಾರದಲ್ಲಿ ಬ್ಯಾಂಕು ಒಬ್ಬ ಮುಖ್ಯ ವ್ಯಾಪಾರಿಯಂತೆ ಇರುವದು. ಇದು ಬರೇ ತನ್ನ ಭಾಂಡವಲದ ಕಡೆಗೆ ಲಕ್ಷ್ಯಗೊಟ್ಟು, ಸ್ವಂತದ ಲಾಭವನ್ನು ಬಯಸಿದರೆ ಪರಸ್ಪರ ಸಹಾಯಕಾರತೆಯು ಸ್ವಪ್ನದಲ್ಲಿಯೂ ಕೂಡ ಬರುವದಿಲ್ಲ. ಸದ್ಯಕ್ಕೆ ಹಿಂದುಸ್ತಾನದಲ್ಲಿ ಬೇಸಾಯವೇ ಮುಖ್ಯ ಉದ್ಯೋಗವೇ ಆಗಿದ್ದು ಅದರಿಂದಲೇ ವ್ಯವಹಾರವು ನಡೆದಿರುವದೆಂಬ ಮಾತು ಸರ್ವ ಸಾಧಾರಣವಾಗಿ ಎಲ್ಲರಿಗೂ ತಿಳಿದದ್ದಾಗಿದೆ. ಈ ವ್ಯವ ಹಾರಕ್ಕೆ ಬ್ಯಾಂಕುಗಳು ಸಹಾಯಕಾರಿಗಳಾಗಿರುತ್ತವೆಂಬದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

## Robert Owen, Father of Co-operation

ಸಹಕಾರೀ ಚಳವಳಿಯ ಜನಕರಾದ

## ೧೭. ರಾಬರ್ಟ ಓವೆನ್ ದೊರೆಗಳ ಜೀವನ ಚರಿತ್ರ

ಹದಿನೆಂಟನೇ ಶತಮಾನದ ಉತ್ತರಾರ್ಧದಲ್ಲಿ ಯುರೋಪ ಖಂಡ ದೊಳಗೆ ಅದರಲ್ಲಿಯೂ ಮುಖ್ಯವಾಗಿ ಇಂಗ್ಲಂಡದೊಳಗೆ ಆಶ್ಚರ್ಯಕ

ರವಾದ ಔದ್ಯೋಗಿಕ ಕ್ರಾಂತಿಯುಂಟಾಯಿತು. ಕೈರಾಟಿ, ಕೈಮಗ್ಗ ಗಳು ಮುಗ್ಗಿಹೋಗಿ ಉಗಿಯ ಯಂತ್ರಗಳು ಬಳಿಕೆಯಲ್ಲಿ ಬಂದವು; ಭವ್ಯವಾದ ಕಾರಖಾನೆಗಳು ಉಪಸ್ಥಿತವಾದವು; ತೀರ ಕಾಡಸ್ಥಿತಿಯ ಲ್ಲಿದ್ದ ಹಳ್ಳಿಪಳ್ಳಿಗಳು ವ್ಯಾಪಾರದ ಮೂಲಕ ಪ್ರಸಿದ್ಧ ಶಹರಗಳಾದವು; ಕಾಲ ಚಕ್ರದ ಕಾರ್ಯದ ಬದಲಾವಣೆಯ ರಭಸದ ಹೊಡತಕ್ಕೆ ಹಳ್ಳಿ ಗಾಡ ಒಕ್ಕಲಿಗರು ತಮ್ಮ ತಮ್ಮ ಹೊಲಮನೆಗಳನ್ನು ಬಿಟ್ಟು ಕೊಟ್ಟು ಶಹರಗಳಿಗೆ ಪ್ರಯಾಣಬೆಳಿಸಿದರು. (ಕಾರಖಾನೆಯ) ಯಜಮಾನ, ವ್ಯಾಪಾರಗಾರ, ಅಂಗಡಿಕಾರ ಮತ್ತು ಕೂಲಿಕಾರರಲ್ಲಿರತಕ್ಕ ಪರಸ್ಪರ ಭೇದವು ತಿಳಿಯುದಂತಾಯಿತು. ಉಗಿಯ ಯಂತ್ರದ ಶೋಧನೆಯ ಅಬ್ಬರಕ್ಕೆ ಜನಸಾಮಾನ್ಯವು ತತ್ತರಿಸಿ ತಮ್ಮ ಉದ್ಯೋಗವನ್ನು ಜೀವನ ಕ್ರಮವನ್ನು (Mode of Living) ಸಂಪೂರ್ಣವಾಗಿ ಬದಲಾಯಿ ಸಿತು. ಆ ಕಾಲದ ಕೂಲಿಕಾರರ ಬಾಳು ದೇವರೇ ಬಲ್ಲ. ಇವರು ಸಹಕಾರದ ಅವಕೃಪೆಗೆ ಪಾತ್ರರಾಗಿದ್ದರು. ಇವರ ವತಿಯಿಂದ ಒಬ್ಬ ಪ್ರತಿನಿಧಿಯಾದರೂ ಪಾರ್ಲಿಮೆಂಟಿನ ಹೊಸ್ತಿಲವನ್ನು ಕಂಡಿರಲಿಲ್ಲ. ಕೂಲಿಕಾರರೆಲ್ಲರಿಗೂ ಒಬ್ಬ ಮುಂದಾಳು ಬೇಕಾಗಿದ್ದನು. ಕಾಲಪರಿ ಸ್ಥಿತಿಗನುಸರಿಸಿ ಪರಮೇಶ್ವರನು ಅವರಿಗೆ ಒಬ್ಬನನ್ನು ಒದಗಿಸಿಕೊ ಟ್ಟನು. ಅವನೇ ನಮ್ಮ ಚರಿತ್ರನಾಯಕನಾದ ರಾಬರ್ಟನು.

ರಾಬರ್ಟನ ಜನ್ಮದಿನವು ಕ್ರಿ. ಶ. ೧೭೭೧ ನೇ ಮೇ ತಿಂಗಳ ೧೪ನೇ ತಾರೀಖು. ಜನ್ಮಸ್ಥಳವು ಮಾಂಟಗೋಮೇರಿ ತಾಲೂಕಿನೊ ಳಗಿರುವ ನ್ಯೂಟನ್ ಗ್ರಾಮವು. ಇವನ ತಂದೆಯು ಕೆಲವು ದಿನ ಜೀನುಗಾರ ಕೆಲಸವನ್ನು ಕೆಲವು ದಿನ ಪೋಷ್ಟಮಾಸ್ತರನ ಕೆಲಸವನ್ನು ಮಾಡಿದನು. ರಾಬರ್ಟನಲ್ಲಿರತಕ್ಕ ಅವನ ತೀಕ್ಷ್ಣ ಬುದ್ಧಿಯು ಬಾಲ್ಯದ ಲ್ಲಿಯೇ ಬೆಳಗಿತು. ಅವನು ತನ್ನ ಏಳನೇ ವರುಷದಲ್ಲಿಯೇ ಶಾಲೆಯಲ್ಲಿ ಹಿರೇಮಣಿ (Monitor) ಯಾದನು. ಹತ್ತು ವರುಷ ತುಂಬುವದರೊ ಳಗಾಗಿಯೇ ತನ್ನ ಗ್ರಾಮದಲ್ಲಿ ದೊರೆಯುವ ಯಾವತ್ತೂ ಪುಸ್ತಕಗ

ಳನ್ನು ತಿರುವಿ ಹಾಕಿದನು. ಮುಂದಿನ ಒಂಬತ್ತು ವರುಷಗಳನ್ನು ಚಿಲ್ಲರ ವ್ಯಾಪಾರ ಮಾಡುವದರಲ್ಲಿ ಕಳೆದನು. ಮೊಟ್ಟ ಮೊದಲು ಅವನು ತನ್ನ ಗ್ರಾಮದಲ್ಲಿಯೇ ಎರಡನೇಯವರ ಅಂಗಡಿಯಲ್ಲಿ ನಿಂತನು. ಆ ಮೇಲೆ ಲಂಡನ್ ಪಟ್ಟಣದೊಳಗಿರುವ ತನ್ನ ಅಣ್ಣನ ಬಳಿಯಲ್ಲಿ ಜೀನುಗಳ ವ್ಯವಹಾರದಲ್ಲಿ ನುರಿತನು. ಮೂರು–ನಾಲ್ಕು ವರುಷ ಜವಳೀ ವ್ಯವಹಾರವನ್ನು ಮಾಡಿ ೧೯ ವರುಷದ ಸುಮಾರಿಗೆ ಮ್ಯಾಂಚೆಸ್ಟರ ಗ್ರಾಮದಲ್ಲಿ ಸ್ವತಂತ್ರ ಉದ್ಯೋಗ ಮಾಡಲಿಕ್ಕೆ ಅಣಿಯಾದನು. ಅಲ್ಲಿ ಹೆಸರುವಾಸಿಯಾದ ಒಂದು ನೂಲುವ ಕಾರಖಾನೆಯಲ್ಲಿ ಪಾಲಿನಿಂದ ಕೆಲಸಮಾಡಲಿಕ್ಕೆ ಪ್ರಾರಂಭಿಸಿದನು. ಅಲ್ಲಿ ರಾಬರ್ಟನು ವೇದಾಂತ ಮತ್ತು ಸಾಹಿತ್ಯ ಸಂಸ್ಥೆಗಳಿಗೆ ಸಭಾಸದನಾಗಿ ಅಲ್ಲಿಂದ ಯಾವತ್ತು ಸಭ್ಯ ಗೃಹಸ್ಥರಿಗೂ ದೊಡ್ಡ ದೊಡ್ಡ ವಿದ್ವಾಂಸರಿಗೂ ಪರಿಚಿತನಾದನು.

ಸನ್ ೧೭೯೯ ರಲ್ಲಿ ಗ್ಲಾಸಗೋ ಪಟ್ಟಣದಲ್ಲಿರತಕ್ಕ ಮಿಸ್. ಡೇಲ ಎಂಬವಳೊಡನೆ ಇವನು ಲಗ್ನವಾಗಿ ಅವಳ ವಶದಲ್ಲಿರತಕ್ಕ ನಾಲ್ಕು ನೂಲುವ ಗಿರಣಿಗಳ ವ್ಯವಸ್ಥಾಪಕನಾದನು. ಅಂದಿನಿಂದ ಅವನು ಪರೋಪಕಾರದ ಕೆಲಸಗಳಲ್ಲಿ ಕೈಹಾಕಹತ್ತಿದನು. ಇಲ್ಲಿ ಅವನು ಇಪ್ಪತ್ತೆಂಟುವರುಷಗಳ ವರೆಗೆ ಇದ್ದು ಕೆಳಗೆ ಬರೆದ ಸಂಗತಿಗಳ ಬಗ್ಗೆ ಬಹಳೇ ಶ್ರಮಪಟ್ಟನು. (೧) ಚಿಕ್ಕಮಕ್ಕಳ ವಿದ್ಯಾಭ್ಯಾಸ (೨) ಗಿರಣಿಗಳಲ್ಲಿ ಕೆಲಸ ಮಾಡುತ್ತಿರುವ ಕೂಲಿಕಾರರ ಚಿಂತನ ಮತ್ತು (೩) ಕಾರಖಾನೆಗಳ ಸುಧಾರಣೆ. ಅವನು ಕೆಲಸಮಾಡುತ್ತಿರುವ ನ್ಯೂಲಾನಾರ್ಕ ಗ್ರಾಮದ ಜನರು ನಿರುದ್ಯೋಗಿಗಳೂ, ಬಡವರೂ, ಸಾಲಗಾರರೂ, ಶಕ್ತಿಹೀನರೂ ಮತ್ತು ಮೇಲಿಂದ ಮೇಲೆ ಸಂಕಟಗಳಿಗೆ ತುತ್ತಾಗುವವರೂ ಇರುವರೆಂದು ಕಂಡುಬಂದಿತು. ಆರು, ಏಳು, ಎಂಟು ವರುಷಗಳ ಐದುನೂರು ಬಾಲಕರು ಆ ಕಾರಖಾನೆಯಲ್ಲಿ ಕೆಲಸಮಾಡುತ್ತಿದ್ದರು. ಈ ಎಳೆಗೂಸುಗಳು ಮುಂಜಾನೆ ಆರು ಘಂಟೆಯಿಂದ ಸಂಜೆ ಏಳು ಘಂಟೆಯವರೆಗೆ ಎದ್ದು ನಿಂತುಕೊಂಡೇ

ಕೆಲಸಮಾಡಬೇಕಾದುದರಿಂದ ಹದಿನೈದು ವರುಷ ವಯಸ್ಸಿನವರಾಗುವದರೊಳಗಾಗಿಯೇ ಅವರಿಗೆ ಮುಪ್ಪಿನ ಅವಸ್ಥೆಯು ಪ್ರಾಪ್ತವಾಗುತ್ತಲಿತ್ತು.

ರಾಬರ್ಟನು ತನ್ನ ನಿರ್ವಾಹಕ್ರಮದ ಅನುಭವದಿಂದ ಸೂಕ್ಷ್ಮವಿರುವ ಶಾರೀರಕ ಯಂತ್ರವನ್ನು ನಿರ್ಜೀವ ಯಂತ್ರದಂತೆಯೇ ಆದಷ್ಟು ಲಕ್ಷ್ಯಪೂರ್ವಕವಾಗಿ ಉಪಯೋಗಿಸಬೇಕೆಂದು ಕಂಡು ಹಿಡಿದನು. ಕೂಲಿಯ ದರವನ್ನು ಹೆಚ್ಚಿಸಿದನು; ದುಡಿತದ ವೇಳೆಯನ್ನು ೧೪ ತಾಸು ಇದ್ದದ್ದನ್ನು ೧೦ ತಾಸು ಮಾಡಿಸಿದನು; ಕೂಲಿಕಾರರ ಜೀವನಕ್ರಮದಲ್ಲಿ ಸುಧಾರಣೆಯನ್ನು ಮಾಡಿದನು; ಕಡಿಮೆ ವೆಚ್ಚದಿಂದ ಆರೋಗ್ಯಕರವಾದ ಆಹಾರವು ಸಿಗುವಂತೆ ಮಾಡಿದನು; ಪ್ರತಿಯೊಬ್ಬ ಕೂಲಿಕಾರನ ದಿನದ ಕೆಲಸವನ್ನು ಪರೀಕ್ಷಿಸಿ ಅವನ ತರಗತಿಯನ್ನು ನಮೂದಿಸುವಂತೆ ಪ್ರಯತ್ನಿಸಿದನು. ಈ ಯಾವತ್ತೂ ಸುಧಾರಣೆಗಳಿಂದ "ನ್ಯೂಲಾನರ್ಕವು" ದೇಶದಲ್ಲಿರುವ ಬೇರೆ ಗಿರಣಿಗಳಿಂದ ಔದ್ಯೋಗಿಕ, ಆರೋಗ್ಯಕ ಮತ್ತು ಸೌಖ್ಯದ ಮಾನದಿಂದ ಮೇಲ್ತರದ್ದಾಗಿ ಒಡೆದು ಕಾಣಹತ್ತಿತು. ಲೀಡ್ಸ ಪಟ್ಟಣದ ಪರವಾಗಿ ಕಳಿಸಿದ ಪ್ರತಿನಿಧಿಗಳಲ್ಲಿ ರಾಬರ್ಟನ ಜನರು ಹೆಚ್ಚು ಸುಖಿಗಳಿರುವರೆಂದು ಅವರ ಮುಖಚರ್ಯದಿಂದಲೂ ಜೀವನ ಕ್ರಮದಿಂದಲೂ ಕಂಡು ಬಂದಿತು. ಇದಕ್ಕೆಲ್ಲ ರಾಬರ್ಟನೇ ಕಾರಣನೆಂದು ಬೇರೆ ಹೇಳಲವಶ್ಯವಿಲ್ಲ. ಇವನು ಕೂಲಿಕಾರರ ಮಕ್ಕಳಿಗೆ ಹೆಚ್ಚು ಸೌಲಭ್ಯವಾಗುವಂತೆ ಕೆಲವೊಂದು ವೇಳೆ ದುಡಿದು ಉಳಿದ ಹೊತ್ತಿನಲ್ಲಿ ಅವರಿಗೆ ಶಿಕ್ಷಣವನ್ನು ಕೊಡಿಸುವ ವ್ಯವಸ್ಥೆಯನ್ನು ಮಾಡಿದನು. ಬಗೆ ಬಗೆಯ ಆಟ-ನೋಟ ಮತ್ತು ವಿಹಾರಗಳಿಂದ ಅವರ ಕೆಲಸದ ಪರಿಶ್ರಮವು ದೂರಾಗುವಂತೆ ಹಾಡು, ಕವಾಯತು ಮುಂತಾದವುಗಳಿಗೆ ಉತ್ತೇಜನವನ್ನು ಕೊಟ್ಟನು. ತರತರದ ಚಿತ್ರಪಟ ನಕಾಶಗಳಿಂದ ವಿದ್ಯಾಪ್ರಸಾರವಾಗುವಂತೆ ಮಾಡಿದನು. ಚಿಕ್ಕಮಕ್ಕಳ ಸಲುವಾಗಿಯೇ ಸ್ವತಂತ್ರ

ಶಾಲೆಗಳು ಏರ್ಪಾಡಾದವು. ಹನ್ನೊಂದು ಹನ್ನೆರಡು ವರ್ಷದ ಮಕ್ಕಳಿಗೆ ದಿನಾಲು ಆರು ತಾಸು ತೋಟದಲ್ಲಿ ಕೆಲಸಮಾಡುವಂತೆ ಯೋಚಿಸಿದನು. ರಾಬರ್ಟ ಓವೆನ್‌ನ ಪದ್ಧತಿಯನ್ನು ಆ ಕಾಲಕ್ಕೆ ಎಷ್ಟೋ ಮುಂದಾಳುಗಳು ಅನುಕರಣ ಮಾಡಿದಾಗ್ಯೂ ಅವರಿಗೆ ಈ ಪದ್ಧತಿಯಂತೆ ನಡೆಯಲಿಕ್ಕೆ ಹಚ್ಚುವದು ಕಷ್ಟಸಾಧ್ಯವಾಯಿತು. ಬೇರೆ ಗಿರಣಿಗಳ ಚಾಲಕರು ಅರಳೆಯ ಮೇಲಿನ ಕರವನ್ನು ಕಡಿಮೆ ಮಾಡಲಿಕ್ಕೆ ಸರಕಾರಕ್ಕೆ ಒತ್ತಾಯಪಡಿಸಿದರು; ಆದರೆ ಗಿರಣಿಗಳಲ್ಲಿ ಕೆಲಸ ಮಾಡುವ ಕೂಲಿಕಾರರ ಜೀವನಕ್ರಮವನ್ನು ಸುಧಾರಿಸುವದಕ್ಕೆ ಕಾಯಿದೆಗಳನ್ನು ಮಾಡಿಸಲು ಹಿಂಜರಿದರು. ಓವೆನ್‌ನ ಪ್ರಯತ್ನದಿಂದಲೇ ೧೮೧೯ ನೇ ಇಸ್ವಿಯ ಫ್ಯಾಕ್ಟರೀ ಕಾಯದೆಯು ಪಾಸಾಗಿ ಚಿಕ್ಕ ಮಕ್ಕಳು ದುಡಿಯುವ ವೇಳೆಯು ಹನ್ನೆರಡು ತಾಸಿಗಿಂತ ಹೆಚ್ಚಿರಕೂಡದೆಂದು ನಿರ್ದಿಷ್ಟ ಮಾಡಿತು. ಓವೆನ್‌ನು ೧೮೨೪ ರ ವರೆಗೆ ನ್ಯೂಲಾನಾರ್ಕದಲ್ಲಿ ಉಳಿದನು ಕೆಲವೊಂದು ಧಾರ್ಮಿಕ ತತ್ವಗಳ ವಿಷಯವಾಗಿ ಇವನಿಗೂ ಇವನ ಪಾಲುಗಾರರಿಗೂ ಮತಭೇದವುಂಟಾಗಿ ಕಟ್ಟಕಡೆಗೆ ತನ್ನ ಪಾಲನ್ನು ತೆಗೆದುಕೊಂಡು ಹೊರಟನು.

ಮುಂದೆ ಅವನು ಲಂಡನ್ನಕ್ಕೆ ಬಂದು "Economist" ಎಂಬ ಹೊಸ ಮಾಸಿಕ ಪತ್ರವನ್ನು ಹೊರಡಿಸಿ ಅದರಲ್ಲಿ ಕೂಲಿಕಾರರ ಸುಧಾರಣೆಯ ಬಗ್ಗೆ ವಿಷಯಗಳನ್ನು ಚರ್ಚಿಸಿ ಬರೆಯಹತ್ತಿದನು. ಇವನು ತನ್ನ ವಿಚಾರಗಳನ್ನೆಲ್ಲಾ ಸರಕಾರಕ್ಕೆ ಅರುಹಿ ಅವು ಫ್ಯಾಕ್ಟರೀ ಕಾಯಿದೆಗಳಲ್ಲಿ ಸೇರುವಂತೆ ಒತ್ತಾಯಪಡಿಸಿದನು. ತನ್ನ ಎಲ್ಲ ತತ್ವಗಳು ಆಳರಸರಿಗೆ ಗೊತ್ತಾಗುವಂತೆ ಹೆಚ್ಚು ಪ್ರಯತ್ನಿಸಿದನು. ನ್ಯೂಲಾನಾರ್ಕದಲ್ಲಿ ಕೈಕೊಂಡ ಎಲ್ಲ ಸುಧಾರಣೆಗಳು ತನ್ನ ದೇಶದ ತುಂಬ ಪ್ರಸಾರವಾಗಬೇಕೆಂದು ಸರಕಾರಕ್ಕೆ ಸೂಚಿಸಿದನು. ೧೮೧೯ರ ಕಾರಖಾನೆಗಳು ಪ್ರತಿನಿಧಿಗಳ ವರದಿಯಲ್ಲಿ ಯಾವತ್ತೂ ಸುಧಾರಣೆಗಳು ತಂದೆ ತಾಯಿಗಳಿಲ್ಲದ ಬಡಹುಡುಗರಿಗೆ ಮಾತ್ರ ಸರಿಯಾಗುವಂತೆ

ಸಿಫಾರಸು ಮಾಡಲ್ಪಟ್ಟವು. ಅದೇ ವರುಷ ಒಂದು ಬೇಗೆ ಕಮಿಟಿಯು ಸ್ಥಾಪಿತವಾಗಿ ಅದರ ಪರವಾಗಿ ಔದ್ಯೋಗಿಕ ಹಳ್ಳಿಗಳಲ್ಲಿರತಕ್ಕ ಕೊರತೆಗಳನ್ನು ಗೊತ್ತುಪಡಿಸಿ ವರದಿಯನ್ನು ಕೊಡುವಂತೆ ಠರಾಯಿಸಿದರು. ಈ ಕಮಿಟಿಯಲ್ಲಿ ೭-೮ ಜನ ಪಾರ್ಲಿಮೆಂಟರಿ ಸಭಾಸದರಿದ್ದರು.

ಇವನ ಮಾಸಿಕದ ಪರಿಣಾಮವು ಜನರ ಮೇಲೆ ಚನ್ನಾಗಿ ಬಿಂಬಿಸಿ ಅದರಿಂದ ೪-೫ ವರುಷಗಳಲ್ಲಿಯೇ ೫-೬ ಕೂಲಿಕಾರರ ವಸಹಾತುಗಳು (Societies) ಸ್ಥಾಪಿಸಲ್ಪಟ್ಟವು. ಈ ಸಜಾತಿಯ ಸಂಸ್ಥೆಗಳೂ ಸಹಕಾರೀ ಸಂಘಗಳೂ ರಾಬರ್ಟ ಓವೆನ್‌ನ ದೀರ್ಘಪ್ರಯತ್ನದ ಫಲಗಳಾಗಿದ್ದವು.

ಓವೆನ್‌ನು ನ್ಯೂಲಾನಾರ್ಕ ಬಿಟ್ಟನಂತರ ಪ್ರತ್ಯಕ್ಷರೀತಿಯಿಂದ ಕೂಲಿಕಾರರಿಗೆ ಉಪದೇಶಮಾಡಲಿಕ್ಕೆ ಪ್ರಾರಂಭಿಸಿದನು. ಇವನು ಲಂಡನ್‌ದ ಕೂಲಿಕಾರರ ಮನಸ್ಸಿನಲ್ಲಿ ತನ್ನ ಪವಿತ್ರ ವಿಚಾರಗಳನ್ನೂ, ಪದ್ಧತಿಗಳನ್ನೂ ಮತ್ತು ವ್ಯವಹಾರ್ಯ ಸೂಚನೆಗಳನ್ನೂ ಪ್ರತಿಬಿಂಬಿಸಿದನು. ಇವನು ಎಲ್ಲಾ ಸಂಸ್ಥೆಗಳಲ್ಲಿಯೂ, ಸಭೆಗಳಲ್ಲಿಯೂ, ಮಹಾಸಭೆಗಳಲ್ಲಿಯೂ ಭಾಗತೆಗೆದುಕೊಳ್ಳಹತ್ತಿದನು.

ಸನ್ ೧೮೩೨ ರಲ್ಲಿ ಎಷ್ಟೋ ಸಹಕಾರೀ ಸಂಘಗಳು ಸಣ್ಣ ಪ್ರಮಾಣದಿಂದ ಕೈಕಸಬುಗಳನ್ನು ಪ್ರಾರಂಭಿಸಿದವು. ಆದರೆ ತಯಾರಾದ ಮಾಲನ್ನು ಮಾರಲಿಕ್ಕೆ ಅಷ್ಟೊಂದು ಸುಲಭವಾಗಲಿಲ್ಲ. ಇದಕ್ಕೋಸುಗ ಲಂಡನದ ಹತ್ತರ ೧೮೩೦ ರಲ್ಲಿ ಒಂದು ಸಂಸ್ಥೆಯು ಸ್ಥಾಪಿತವಾಯಿತು. ಓವೆನ್‌ನು ಅದರ ಕೆಲಸವನ್ನು ಭರದಿಂದ ಕೈಕೊಂಡನು. ೧೮೩೨ ರಲ್ಲಿ ಲಂಡನದ ಗ್ರೇಇನ್ ರೋಡಿನಲ್ಲಿ "The Equitable Labour Exchange" ಪ್ರಾರಂಭವಾಯಿತು.

ಅದೇ ಅರುಷ ಅಂದರೆ ೧೮೩೨ರಲ್ಲಿ ಜರುಗಿದ ಸಹಕಾರೀ ಸಭೆಯ ಪರವಾಗಿ ಎಷ್ಟೋ ಸಮಾಜ ಸುಧಾರಕರು ದೇಶದಲ್ಲಿ ತಿರುಗಾಡಿ ಚಳವಳಿಯನ್ನು ಅತಿಜೋರಿನಿಂದ ಸಾಗಿಸಹತ್ತಿದರು. ೧೮೩೪ ರಲ್ಲಿ ಒಂದು ದೊಡ್ಡ ರಾಷ್ಟ್ರೀಯ ವ್ಯಾಪಾರ ಸಂಘವು ಕೂಡಿತು. ಇದರಲ್ಲಿ ಓವೆನ್‌ರೇ ಪ್ರಮುಖರಾಗಿದ್ದರು. ರಾಷ್ಟ್ರೋದ್ಧಾರಕ್ಕಾಗಿ ಇನ್ನೊಂದು ಸಂಘವು ಸ್ಥಾಪಿಸಲ್ಪಟ್ಟಿತು. ಈ ಸಂಘವು ಕೂಲಿಕಾರರ ದುಡಿತದ ವೇಳೆಯನ್ನು ೮ ತಾಸುಗಳ ವರೆಗೆ ನಿರ್ದಿಷ್ಟಮಾಡಿತು. ಇದು ೧೮೪೭ ರಲ್ಲಾದ ಚಳವಳಿಗೆ ಹುರುಪುಕೊಟ್ಟಿತು.

ಇವರು ೧೮೮೪ರಲ್ಲಿ "The New Moral World" ಎಂಬ ಮತ್ತೊಂದು ವಾರಪತ್ರವನ್ನು ಹೊರಡಿಸಹತ್ತಿದರು. ಇದರ ಉದ್ದೇಶವು ಸಮಾಜದ ಸಂಘಟನೆಯಕಾರ್ಯವಾಗಿದ್ದಿತು. ಮುಂದೆ ಈ ಪತ್ರವು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಹೆಸರುಗಳಿಂದ ಪ್ರಸಿದ್ಧವಾಯಿತು.

ಓವೆನ್‌ರವರ ಕಡೆಯ ಹದಿಮೂರು ವರುಷಗಳು ಸರ್ವ ಸಾಧಾರಣ ನಿವೃತ್ತಿಯಲ್ಲಿಯೇ ಕಳೆದುಹೋದವು. ಇವರು ತಮ್ಮ ಮುಪ್ಪಿನ ಕಾಲದಲ್ಲಿ ಧಾರ್ಮಿಕರ ಪಂಗಡಗಳನ್ನು ಸೇರಿ ಅವರ ಸಹಾನುಭೂತಿಯನ್ನು ಸಂಪಾದಿಸಿದರು. ಇವರು ತಮ್ಮ ಜನ್ಮಸ್ಥಳವಾದ ನ್ಯೂಟನ್ ಗ್ರಾಮದಲ್ಲಿಯೇ ವೃದ್ಧಾಪ್ಯದ ಜೋರಿನಿಂದ ಸ್ವರ್ಗಸ್ಥರಾದರು. ಮರಣ ಕಾಲದವರೆಗೂ ಸಹಕಾರೀ ಚಳವಳಿಯ ಉನ್ನತಿ ಬಗ್ಗೆ ಬಹಳೇ ಪ್ರಯತ್ನಪಟ್ಟು ಅದರಂತೆ ಎಷ್ಟೋ ಅಘಟಿತ ಕಾರ್ಯಗಳನ್ನು ಜನಸಾಮಾನ್ಯಕ್ಕೆ ಮಾಡಿ ತೋರಿಸಿದರು. ಇವರ ತಾಯಿ ತಂದೆಗಳ ಸಮಾಧಿಯ ಹತ್ತರವೇ ಇವರ ಸಮಾಧಿಯಾದರೂ ಕಟ್ಟಲ್ಪಟ್ಟು ಸನ್ ೧೯೦೨ ರಲ್ಲಿ ಸಹಕಾರ ಪ್ರಚಾರಕರಿಂದ ಅದು ಉತ್ತರೋತ್ತರ ಅಭಿವೃದ್ಧಿಯನ್ನೈದಿತು.

## The late Sir Vithaldas Thackersey, his Life & Work

## ೧೮. ಸ್ವರ್ಗಸ್ಥರಾದ ಸರ್ ವಿಠ್ಠಲದಾಸ ಠಾಕರ್ಸಿಯವರ ವೃತ್ತಾಂತ.

ಸರ್ ವಿಠ್ಠಲದಾಸ ಥಾಕರ್ಸಿಯವರ ಜನ್ಮವು ಇ. ಸ. ೧೮೭೩ ರಲ್ಲಿ ಆಯಿತು. ಇವರ ಆರಂಭದ ಶಿಕ್ಷಣವು ಖಾಸಗೀ ರೀತಿಯಿಂದಲೇ ಆಯಿತು. ತಮ್ಮ ವಯಸ್ಸಿನ ೧೭ ನೇ ವರ್ಷದಲ್ಲಿ ಪ್ರವೇಶ ಪರೀಕ್ಷೆಯನ್ನು ಪಾಸಾಗಿ, ಅವರು ಎಲ್‌ಫಿನಸ್ಟನ್ ಕಾಲೇಜದಲ್ಲಿ ಕೆಲವು ದಿವಸಗಳ ವರೆಗೆ ಅಭ್ಯಾಸಮಾಡಿದರು. ಆ ಮೇಲೆ ಅವರು ತಮ್ಮ ಹಿರಿಯರು ಮಾಡುತ್ತಿರುವ ವ್ಯಾಪಾರದಲ್ಲಿ ಮನಸ್ಸು ಹಾಕಿದರು. ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅವರು ವ್ಯವಸಾಯದಲ್ಲಿ ತೊಡಗಿದ್ದರಿಂದ, ಮುಂಬಯಿ ಶಹರದ ವ್ಯಾಪಾರೋದ್ಯೋಗಗಳಲ್ಲಿ ಇವರು ಬಹಳೇ ಮುಂದುವರಿಯುವರೆಂದು ಅವರಿಗೆ ಸಂಬಂಧಿಸಿದ ಹಲಕೆಲವು ಗೃಹಸ್ಥರು ಭವಿಷ್ಯವನ್ನು ಹೇಳಿದರು. ಅದರಂತೆಯೇ ಇವರು ನಿಜವಾಗಿ, ಇವರು ವ್ಯಾಪಾರದಲ್ಲಿ ಅಲೌಕಿಕವಾದ ಕೀರ್ತಿಯನ್ನು ಪಡೆದರೆಂಬುವದು ಸರ್ವಶ್ರುವವಿರುತ್ತದೆ. ಮುಂಬಯಿಯ ಎಲ್ಲ ತರದ ವ್ಯಾಪಾರೋದ್ಯೋಗಗಳ ಚಳವಳಿಯಲ್ಲಿ ಸರ್ ವಿಠ್ಠಲದಾಸ ಇವರು ಪ್ರಾಮುಖ್ಯವಾಗಿ ಮನಸ್ಸು ಹಾಕಿದರು. ಇಷ್ಟೇ ಅಲ್ಲದೆ ಉದ್ಯೋಗ, ವ್ಯಾಪಾರ ಮತ್ತು ಆರ್ಥಿಕ ವಿಷಯಗಳಲ್ಲಿ ಯಾರಿಗೆ ಅಧಿಕಾರಯುಕ್ತ ರೀತಿಯಿಂದ ಹೇಳಲಿಕ್ಕೆ ಬರುತ್ತದೋ ಅಂಥವರೊಳಗೆ ಇವರೊಬ್ಬರಾಗಿದ್ದರು. ಅವರಿಗೆ ತಮ್ಮ ಸ್ವಂತದ ೫-೬ ಗಿರಣಿಗಳು ಇದ್ದವು. ಇಷ್ಟೇ ಕೆಲಸವನ್ನು ಉತ್ತಮರೀತಿಯಿಂದ ಕೆಲಸ ಸಾಗಿಸಿಕೊಂಡು ಹೋಗುವದು ಒಬ್ಬ ಸಾಮಾನ್ಯ ಮನುಷ್ಯನಿಗೆ ಜಡವೆನಿಸುತ್ತಿತ್ತು. ಆದರೆ ಸರ್ ವಿಠ್ಠಲದಾಸ ಇವರ ಕರ್ತೃತ್ವಶಕ್ತಿಯು ಬಹಳೇ ದೊಡ್ಡದಿದ್ದಕಾರಣ ಅವರು ತಮ್ಮ ಕೆಲಸವನ್ನು ಚನ್ನಾಗಿ ನೀಗಿಸಿಕೊಂಡು

ಎರಡನೇ ವ್ಯವಸಾಯದಲ್ಲಿ ಮನಸ್ಸು ಹಾಕಹತ್ತಿದರು. ಮುಂಬಯಿ ಶಹರದಲ್ಲಿಯ ಮಿಲ್‌ಓನರ್ಸ ಅಸೋಸಿಏಶನ್, ಇಂಡಿಯನ್ ಮರ್ಚಂಟ್ಸ್ ಚೇಂಬರ ಆ್ಯಂಡ್ ಬ್ಯುರೋ, ವಗ್ಯೆರಿ ಅನೇಕ ವ್ಯಾಪಾರೀ ಸಂಸ್ಥೆಗಳಲ್ಲಿ ಇವರ ಮುಖ್ಯ ಸಂಬಂಧವಿದ್ದು, ಇವರು ಬಡೋದಾ ಬ್ಯಾಂಕಿನ ಉತ್ಪಾದಕರಿದ್ದರು. ಜಾಮನಗರದ ದ್ವಾರಕಾ ರೇಲ್ವೆ ಕಂಪನಿಯನ್ನು ಇವರೇ ಹೊರಡಿಸಿದರು. ದ್ವಾರಕಾದಲ್ಲಿರುವ ಸಿಮೆಂಟ ಕಂಪನಿಯ ಜನಕರು ಇವರೇ. ಒಕ್ಕಲತನಕ್ಕೆ ಉಪಯೋಗವಾಗುವ ರಂಟೆ ಮುಂತಾದ ಸಾಮಾನುಗಳನ್ನು ತಯಾರಿಸುವ ಕಾರಖಾನೆ ಸಹ ಜೇಮಶೇಟಪುರದಲ್ಲಿ ಇವರಿಂದಲೇ ಸ್ಥಾಪಿಸಲ್ಪಟ್ಟಿತು. ಇದಲ್ಲದೆ ಇವರು ಮುಂಬಯಿಯ ಎಷ್ಟೋ ಕಂಪನಿಗಳ ಡಾಯರೆಕ್ಟರರಾಗಿದ್ದರು. ಈ ಪ್ರಕಾರ ಇವರ ಆಯುಷ್ಯಕ್ರಮವು ಬಹುವಿಧದ ಕರ್ತೃತ್ವಶಕ್ತಿಯಿಂದ ತುಂಬಿಹೋಗಿತ್ತು.

ತಮ್ಮ ವಯದ ೨೫ ನೇ ವರ್ಷದಲ್ಲಿ ಅವರು ಮುಂಬಯಿ ಕಾರಪೋರೇಶನ್‌ದ ( ಮುನಸಿಪಾಲಟಿ ) ಸಭಾಸದರಾಗಿ ಆರಿಸಲ್ಪಟ್ಟು ಅಲ್ಲಿಯೂ ಅವರು ತಮ್ಮ ಬುದ್ಧಿ ಸಾಮರ್ಥ್ಯದಿಂದ ತೀವ್ರವೇ ತಮ್ಮ ವರ್ಚಸ್ಸನ್ನು ಕೂಡ್ರಿಸಿದರು. ಸನ್ ೧೯೦೪ ರಲ್ಲಿ ಅವರು ಸ್ಟ್ಯಾಂಡಿಂಗ ಕಮಿಟಿಯ ಚೇಅರಮನ್ನರಾದರು. ಮತ್ತು ೧೯೦೭ರಲ್ಲಿ ಮುಂಬಯಿ ಮ್ಯುನಸೀಪಾಲ್ಟಿಯ ಚೇಅರಮನ್ನರಾದರು. ಈ ಹತ್ತು ವರುಷಗಳ ಅವಧಿಯಲ್ಲಿ ಮುಂಬಯಿಯೊಳಗಿನ ಆರೋಗ್ಯ ಸುಧಾರಣೆ, ನೀರಿನ ಪುರವಠೆ, ಮುಂತಾದವುಗಳಲ್ಲಿ ಅವರು ಚನ್ನಾಗಿ ಸುಧಾರಣೆಯನ್ನು ಮಾಡಿದರು. ಇ. ಸ. ೧೯೦೪ ರಲ್ಲಿ ಮುಂಬಯಿಯಲ್ಲಿ ಕೂಡಿದ ಕಾಂಗ್ರೆಸ್‌ದಸಂಗಡ ಇವರು ಔದ್ಯೋಗಿಕ ಪ್ರದರ್ಶನವನ್ನು ಕೂಡ್ರಿಸಿದ್ದರು. ಮುಂದೆ ೨ ವರ್ಷಗಳ ನಂತರ ಕಲಕತ್ತಾ ಪಟ್ಟಣದಲ್ಲಿ ಆದ ಔದ್ಯೋಗಿಕ ಪರಿಷತ್ತಿನ ಅಧಿವೇಶದನ ಅಧ್ಯಕ್ಷಸ್ಥಾನವನ್ನು ಸರ್.

ವಿಠ್ಠಲದಾಸರೇ ಭೂಷಿಸಿದ್ದರು. ಇದರಿಂದ ಇವರ ಔದ್ಯೋಗಿಕ ಪ್ರೀತಿಯು ಎಷ್ಟು ಇತ್ತೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಇವರು ೧೯೦೩ ರಿಂದ ೧೯೧೦ ವರೆಗೆ ಮುಂಬಯಿ ಕಾಯಿದೆ ಕೌನ್ಸಿಲದ ಸಭಾಸದರಾಗಿದ್ದರು. ಕೌನ್ಸಿಲದಲ್ಲಿ ಮುಂಬಯಿ ಶಹರದ ವಸತಿ ಮತ್ತು ಜನರ ಆರೋಗ್ಯದ ಸಂಬಂಧ ಬಹಳೇ ಕಳಕಳಿಯಿಂದ ಮಾತಾಡಹತ್ತಿದರು. ಸರ್. ವಿಠ್ಠಲದಾಸರು ಮುಂಬಯಿಯಲ್ಲಿರುವ ಇಂಪ್ರೂಹ್ವಮೆಂಟ ಟ್ರಸ್ಟ ಮತ್ತು ಪೋರ್ಟಟ್ರಸ್ಟ ಇವುಗಳ ಸಭಾಸದ ರಾಗಿದ್ದರು. ಇದರಿಂದ ಈ ಶಹರದಲ್ಲಿರುವ ಬಡಜನರ ವಸತಿಗಾಗಿ ಮನೆಗಳನ್ನು ಕಟ್ಟಿಸಿ ಪುಣ್ಯ ಪಡೆದುಕೊಂಡರು. ಈ ಪ್ರಕಾರದ ಸಾರ್ವಜನಿಕ ಕೆಲಸದ ಪ್ರತಿಫಲಕ್ಕಾಗಿ ಸರಕಾರದವರಿಂದ ಇವರಿಗೆ ಇ. ಸ. ೧೯೦೮ ರಲ್ಲಿ ಸರ್. ಎಂಬುವ ಬಹುಮಾನದ ಪದವಿಯನ್ನು ದೊರಕಿತು.

ಸರ್ ವಿಠ್ಠಲದಾಸರು ಇ. ಸ. ೧೯೧೩ ರವರೆಗೆ ವರಿಷ್ಠ ಕಾಯದೆ ಕೌನ್ಸಿಲದ ಸಭಾಸದರಾಗಿ, ಅಲ್ಲಿ, ವ್ಯಾಪಾರ ಉದ್ಯೋಗ ಮತ್ತು ಆರ್ಥಿಕ ವಿಷಯಗಳ ಬಗ್ಗೆ ಬಹಳೇ ಚರ್ಚಿಸಿದರು. ಅಲ್ಲಿ ಇರು ವಾಗ್ಗೆ ಕೈ ವಾ. ನಾ. ಗೋಖಲೆ ಇವರ ಮಾರ್ಗ ದರ್ಶಕತ್ವವನ್ನು ಇವರು ಚನ್ನಾಗಿ ಉಪಯೋಗಮಾಡಿ, ನಿರಪೇಕ್ಷಬುದ್ಧಿಯಿಂದ ದೇಶ ಸೇವೆಯನ್ನು ಯಾವರೀತಿಯಿಂದ ಮಾಡುವದೆಂಬದನ್ನೂ ಮತ್ತು ಕೈಯ್ಯಲ್ಲಿ ಹಿಡಿದ ಕೆಲಸವನ್ನು ಎಷ್ಟು ಎಡರುಗಳು ಬಂದಾಗ್ಯೂ ಲಕ್ಷಿ ಸದೆ, ಅದನ್ನು ಕೊನೆಗಾಣಿಸುವದನ್ನೂ ಸರ್ ವಿಠ್ಠಲದಾಸರು ಮನ ಗಂಡರು. ಕೈ. ಗೋಖಲೇಯವರಿಂದ ದೇಶದ ಕಲ್ಯಾಣಕ್ಕಾಗಿ ಸ್ಥಾಪಿ ಸಲ್ಪಟ್ಟ ಸಂಸ್ಥೆಗಳಲ್ಲಿ ಇವರು ವಿಶೇಷವಾಗಿ ಮನಸ್ಸು ಹಾಕಿ, ಆಯಾ ಸಂಸ್ಥೆಗಳಿಗೆ ತನು, ಮನ ಧನಗಳಿಂದ ಸಹಾಯಮಾಡಿದರು. ಸರ್ವಂಟ ಆಫ್ ಇಂಡಿಯಾ ಸೊಸಾಯಿಟಿಯ ( ಮುಂಬಯಿ

ಬ್ರ್ಯಾಂಚ ) ಭವ್ಯವಾದ ಇಮಾರತಿಯ ಸಲುವಾಗಿಯೂ, ಪುಣೆಯ ಸೇವಾಸದನದ ಸಲುವಾಗಿಯೂ ಇವರು ಅನೇಕ ರೀತಿಯಿಂದ ಸಹಾಯಮಾಡಿದರು. ಪರೇಲದಲ್ಲಿ ವರ್ಕಮೆನ್ಸ್ ಇನಸ್ಟಿಟ್ಯೂಟವನ್ನು ಸ್ಥಾಪಿಸುವ ಕೆಲಸದಲ್ಲಿ ಇವರಿಂದ ಬಹಳೇ ಸಹಾಯವಾಯಿತು. ಪುಣೆ ಪಟ್ಟಣದಲ್ಲಿರುವ ಮಹಿಲಾ ವಿದ್ಯಾಲಯಕ್ಕೆ ಇವರು ೧೫ ಲಕ್ಷ ರೂಪಾಯಿಗಳನ್ನು ದೇಣಿಗಿಯಾಗಿ ಕೊಟ್ಟರು. ಬಡರೈತರ ಮಕ್ಕಳ ಆರ್ಟ್ಸ ಮತ್ತು ಮೆಡಿಕಲ್ ಕಾಲೇಜುಗಳಲ್ಲಿಯ ವಿದ್ಯಾಭ್ಯಾಸಕ್ಕಾಗಿ ಸುಮಾರು ೫ ಲಕ್ಷ ರೂಪಾಯಿಗಳನ್ನು ಕೊಟ್ಟರು. ಪುಣೆಯ ಸೇವಾಸದನ, ವನಿತಾವಿಶ್ರಾಮ, ಸೋಶಲ್ ಸರ್ವ್ಹಿಸ ಲೀಗ ವಗೈರೆ ಸಂಸ್ಥೆಗಳಿಗೆ ಇವರು ಬಹಳೇ ದ್ರವ್ಯಸಹಾಯಮಾಡಿದರು.

ಇ. ಸ. ೧೯೨೧ ರಲ್ಲಿ ಮಿ॥ ರಹಿಮತುಲ್ಲಾ ಕರೀಮಭಾಯಿಯವರ ಮೃತ್ಯುವಿನ ನಂತರ ಮುಂಬಯಿ ಶಹರದಲ್ಲಿಯ ಮಿಲ್ ಓನರ್ಸ ಅಸೋಸಿಏಶನದ ವತಿಯಿಂದ ಸರ್ ವಿಠ್ಠಲದಾಸರು ಲೇಜಿಸ್ಲೇಟಿವ್ಹ ಅಸೆಂಬ್ಲಿಗೆ ಪ್ರತಿನಿಧಿಗಳಾಗಿ ಕಳಿಸಲ್ಪಟ್ಟರು. ಮತ್ತು ಅಲ್ಲಿ ಸ್ಥಾಪಿತವಾದ ಡೆಮಾಕ್ರೆಟಿಕ್ ಪಾರ್ಟಿಯ ಚೇಅರಮನ್ನರಾಗಿ ಆರಿಸಲ್ಪಟ್ಟರು.

ಹಿಂದುಸ್ಥಾನದಲ್ಲಿ ಬಂಗಾರದ ನಾಣ್ಯಗಳ ಬಳಿಕೆಯನ್ನು ಅಮಲಿನೊಳಗೆ ತರಬೇಕೆಂದು ಸರಕಾರದವರ ಕೂಡ ಇವರು ಬಹಳ ಚರ್ಚಿಸಿದರು. ಮತ್ತು ಅದರಂತೆ ಲೇಜಿಸ್ಲೇಟಿವ್ಹ ಅಸೆಂಬ್ಲಿಯಲ್ಲಿ ಅದರ ಬಗ್ಗೆ ಒಂದು ಠರಾವನ್ನು ಸಹ ಪಾಸುಮಾಡಿಕೊಂಡರು. ಈ ಪ್ರಕಾರ ಇವರು ಸಾಮಾಜಿಕ, ಔದ್ಯೋಗಿಕ, ನಾಗರೀಕ, ರಾಜಕೀಯ ಸಂಸ್ಥೆಗಳಲ್ಲಿ ಭರಭರಾಟಿಯಿಂದ ಕೆಲಸಮಾಡುವ ಕಾಲದಲ್ಲಿಯೇ ದುರ್ದೈವದಿಂದ ಮೃತ್ಯದೇವತೆಯು ಇವರನ್ನು ತಡವಿದಳು. ಈ ಪೂರ್ವದಲ್ಲಿಯೇ ಇಂಗ್ಲಂಡ, ಅಮೇರಿಕಾ, ಜಪಾನ ಮುಂತಾದ ದೇಶಗಳ ಪರ್ಯಟನವನ್ನು ಮಾಡಿದ್ದರು. ಸರ್. ವಿಠ್ಠಲದಾಸ ಇವರು ತಮ್ಮ

ವಯಸ್ಸಿನ ೫೦ ನೇ ವರ್ಷದಲ್ಲಿಯೇ ಮರಣಹೊಂದಿದ್ದನ್ನು ನೋಡಿ ಯಾರ ಹೃದಮವು ದುಖದಿಂದ ವಿವ್ಹಲವಾಗಲಿಕ್ಕಿಲ್ಲ !!

ಸರ್ ವಿಠ್ಠಲದಾಸ ಇವರ ಆಯುಷ್ಯ ಕ್ರಮದ ರೂಪರೇಖೆಯ ಮೇಲಿಂದ, ಇವರಲ್ಲಿಯ ದೊಡ್ಡಸ್ಥನದ ಗುಣವೂ ಮತ್ತು ಸಾರ್ವಜನಿಕ ಸಂಸ್ಥೆಗಳಲ್ಲಿ ಇವರು ದೊರಕಿಸಿದ ಉಚ್ಚಸ್ಥಾನದ ಮಹತ್ವವೂ ವಾಚಕರ ಲಕ್ಷ್ಯದಲ್ಲಿ ಬರುವದು. ಸಹಕಾರೀ ಚಳವಳಿಯು, ವಸ್ತುತಃ ಬಹುಜನರ ಸಮಾಜದ ಉನ್ನತಿಮಾಡುವ ಒಂದು ಚೇತನಾರೂಪಶಕ್ತಿ ಯೆಂಬುದನ್ನು ಇವರು ಕೂಡಲೇ ಕಂಡುಹಿಡಿದರು. ಈ ಚಳವಳಿಯ ಬಗ್ಗೆ ಇವರು ಅವಿಶ್ರಾಂತ ತಪಶ್ಚರ್ಯವನ್ನು ಮಾಡಿದರೆಂದು ಬೇರೆ ಹೇಳುವ ಕಾರಣವಿಲ್ಲ. ದೇಶದಲ್ಲಿಯ ಒಕ್ಕಲಿಗರ ಮತ್ತು ಸಾಮಾನ್ಯ ಜನರ ಸ್ಥಿತಿಯನ್ನು ಸುಧಾರಿಸಿದ ಹೊರ್ತು ದೇಶದ ಉನ್ನತಿಯಾಗುವದು ಶಕ್ಯವಿಲ್ಲವೆಂದು ಮನಗಂಡು, ಇವರು ತಮ್ಮ ಔದಾರ್ಯಬುದ್ಧಿ ಮತ್ತು ಕಲ್ಪನಾಶಕ್ತಿ, ಸಂಘಟನಾ ಚಾತುರ್ಯ ಮಂತಾದವುಗಳನ್ನು ಸಹಕಾರೀ ಚಳವಳಿಯಲ್ಲಿ ಮುಕ್ತಹಸ್ತದಿಂದ ಮತ್ತು ಉದಾರಮನಸಿನಿಂದ ಧಾರೆಯೆರೆದರು. ಮುಂಬಯಿ ಶಹರದಲ್ಲಿರುವ ಪ್ರೋವ್ಹಿನ್ಸಿಯಲ್ ಕೋ. ಬ್ಯಾಂಕನ್ನು, ನಾ॥ ಲಲ್ಲುಬಾಯಿ ಸಾಮಳದಾಸ ಇವರ ಸಹಾಯದಿಂದ ಸರ್ ವಿಠ್ಠಲದಾಸರೇ ಸ್ಥಾಪಿಸಿದರು.

ಸಹಕಾರೀ ಚಳವಳಿಗೆ ಹಣದ ಕೊರತೆಯಾಗಬಾರದೆಂಬ ಹೇತುವಿನಿಂದ ಅವರು ಸೆಂಟ್ರಲ್ ಬ್ಯಾಂಕನ್ನು ಸ್ಥಾಪಿಸಿದರು. ಅದರಂತೆ ಸಹಕಾರೀ ಸಂಘಗಳೊಳಗಿನ ಮೆಂಬರ ಜನರ ಶಿಕ್ಷಣಕ್ಕಾಗಿ ಎಷ್ಟೋ ಸ್ಥಳಗಳಲ್ಲಿ ಯೋಗ್ಯ ವ್ಯವಸ್ಥೆಮಾಡಿದರು. ಸೊಸಾಯಿಟಿಗಳು ಸ್ಥಾಪಿತವಾದ ಸಣ್ಣ ಸಣ್ಣ ಹಳ್ಳಿಗಳಲ್ಲಿ ಪ್ರೌಢ ವಯಸ್ಸಿನ ನಿರಕ್ಷರರಿಗಳಾದ ಮೆಂಬರ ಜನರಿಗೆ ಯೋಗ್ಯ ಶಿಕ್ಷಣವು ದೊರೆಯುವಂತೆ ರಾತ್ರಿ ಶಾಲೆಗಳು ಸರ್. ವಿಠ್ಠಲದಾಸರಿಂದ ಸ್ಥಾಪಿತವಾಗಿ ಇನ್ನೂ ನಡೆಯುತ್ತಲಿವೆ.

ಸಹಕಾರೀ ಸಂಘಗಳ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸುವದು, ಮತ್ತು ಅವುಗಳಲ್ಲಿಯ ಮೆಂಬರ ಜನರ ಶಿಕ್ಷಣಕ್ಕಾಗಿ ಕಾಳಜಿಯನ್ನು ತೆಗೆದುಕೊಳ್ಳುವದು, ಈ ಎರಡೂ ಮಾರ್ಗಗಳಿಂದ ಇವರು ಸಹಕಾರೀ ಚಳವಳಿಗೆ ಮಾಡಿದ ಸಹಾಯವು ಅತ್ಯಂತ ಪ್ರಶಂಸನೀಯವೂ, ಸಂಸ್ಕ ಣೀಯವೂ ಆಗಿರುತ್ತದೆ. ನೀರಾನದಿಯ ಕಾಲುವೆಯ ಮೇಲೆ ಸ್ಥಾಪಿತವಾದ ಎಲ್ಲ ಸೊಸಾಯಟಿಗಳ ಶ್ರೇಯವು ಇವರದೇ ಇರುತ್ತದೆ. ಇವರು ತಮ್ಮ ಗಿರಣಿಗಳಲ್ಲಿ ಕೆಲಸಮಾಡುವ ಜನರ ಸಲುವಾಗಿ ಒಂದು ಸಹಕಾರೀ ಸಂಘವನ್ನು ಇ. ಸ. ೧೯೧೨ರಲ್ಲಿಯೇ ಸ್ಥಾಪಿಸಿದರು. ಸಾರಾಂಶ, ಸಹಕಾರೀ ಚಳವಳಿಗೆ ತನು-ಮನ-ಧನಗಳಿಂದ ಪ್ರಯತ್ನ ಮಾಡಿದ ಸರ್ ವಿಠ್ಠಲದಾಸರಂಥ ಲಕ್ಷ್ಮೀಪುತ್ರರು ದೊರಕುವದು ಅತಿ ದುರ್ಲಭವಾದ ಮಾತಾಗಿದೆ.

ಮುಂಬಯಿಯಲ್ಲಿರುವ ಸೆಂಟ್ರಲ್ ಇನ್‌ಸ್ಟಿಟ್ಯೂಟದ ಉತ್ಕರ್ಷಕ್ಕಾಗಿ ಮೊದಲಿನಿಂದ ಇವರ ಲಕ್ಷ್ಯವಿದ್ದಿತು. ಸದರ ಸಂಘಕ್ಕೆ ಒಂದು ಇಮಾರತಿಯು ಬೇಕೆಂದು ಇವರು ತಳಮಳಿಸುತ್ತಿದ್ದರು. ಮತ್ತು ಇದರಂತೆ ಸರಕಾರದವರ ಕಡೆಯಿಂದ ಇಮಾರತಿಯ ಸಲುವಾಗಿ ಸ್ಥಳವನ್ನು ದೊರಕಿಸಿ, ಅದರ ನಕಾಶವನ್ನು ಸಹ ವಿಠ್ಠಲದಾಸರೇ ತಯಾರ ಮಾಡಿದರು. ಆದರೆ ಇವರ ಇಚ್ಛೆಯಂತೆ, ಈ ಕೆಲಸವು ಅವರ ಕಣ್ಣೆದುರಿಗೆ ಆಗುವ ಯೋಗವಿದ್ದಂತೆ ತೋರಲಿಲ್ಲ. ಆದರೂ ಸಹ, ಸಹಕಾರೀ ಚಳವಳಿಯಲ್ಲಿ ಅವರು ಮಾಡಿದ ಅಮೂಲ್ಯ ಕೆಲಸವನ್ನು ಲಕ್ಷಕ್ಕೆ ತಂದು ಅವರ ಸ್ಮಾರಕವನ್ನು ನಿಲ್ಲಿಸುವದಕ್ಕಾಗಿ ಸೆಂಟ್ರಲ್ ಇನ್‌ಸ್ಟಿಟ್ಯೂಟದ ಇಮಾರತಿಗೆ ಅವರ ಹೆಸರನ್ನಿಡಬೇಕೆಂದು ನಿಶ್ಚಿತವಾಗಿರುತ್ತದೆ. ಸರ್ ವಿಠಲದಾಸರು ತಮ್ಮ ವ್ಯಾಪಕ ಕಾರ್ಯಕ್ಷೇತ್ರದಿಂದ ಮತ್ತು ಔದಾರ್ಯದಿಂದ ಸಹಸ್ರಾವಧಿ ಜನರನ್ನು ಆಪ್ತರನ್ನಾಗಿ ಮಾಡಿಕೊಂಡಿರುವರು. ಇವರು ಅನೇಕ ಸತ್ಕೃತ್ಯಗ

ಳನ್ನು ಮಾಡಿ ತಮ್ಮ ಕೀರ್ತಿಯನ್ನು ಅಜರಾಮರವಾಗುವಂತೆ ಮಾಡಿದರು.

## Cooperative Societies and their Management

## ೧೯. ಸಹಕಾರೀ ಸಂಘಗಳು ಮತ್ತು ಅವುಗಳ ಆಡಳಿತೆಯು

**ಸಹಕಾರವೆಂದರೇನು** ?:— ಸರ್ವಸಾಧಾರಣವಾಗಿ ಒಂದೇ ತರಹದ ಗರಜುಗಳುಳ್ಳಂತಹ ಜನರು ತಮ್ಮ ತಮ್ಮ ಗರಜುಗಳನ್ನು ಹೋಗಲಾಡಿಸಿ ಕೊಳ್ಳುವದಕ್ಕಾಗಿ ತಮ್ಮ ತಮ್ಮಲ್ಲಿ, ಮಿತವ್ಯಯ, ಸ್ವಾವಲಂಬನ, ಪರಸ್ಪರ ಸಹಾಯ ಹಾಗೂ ಸ್ವಾರ್ಥತ್ಯಾಗ ಈ ಮೊದಲಾದ ಗುಣಗಳನ್ನು ಅಭಿವೃದ್ಧಿಗೊಳಿಸಿಕೊಂಡು, ತಮ್ಮ ತಮ್ಮ ಆರ್ಥಿಕ ಸಾಮಾಜಿಕ ಮತ್ತು ನೈತಿಕ ಸುಧಾರಣೆಯನ್ನು ಮಾಡಿಕೊಳ್ಳುವದಕ್ಕಾಗಿ, ಸ್ವಸಂತೋಷದಿಂದ ಒಂದೆಡೆಯಲ್ಲಿ ಕೂಡಿಕೊಂಡು, ಸಮಾನತೆ, ಸಮಾನ ಹಕ್ಕು ಮತ್ತು ಸರಿಯಾದ ನ್ಯಾಯ, ಲಾಭ ಹಾನಿಯಲ್ಲಿ ಪಾಲುಗಾರಿಕೆ, ಈ ತತ್ವಗಳ ಮೇಲೆ, ಸಾಮೂಹಿಕ ನಿಯಂತ್ರಣಕ್ಕೆ ಒಳಪಟ್ಟು, ಕಾಯಿದೇ ಬದ್ಧರೀತಿಯಿಂದ, ಮಾನವ್ಯತೆಯ ಕಡೆಗೆ ಲಕ್ಷ್ಯಕೊಟ್ಟು, ತಮ್ಮ ತಮ್ಮ ವ್ಯವಹಾರೋದ್ಯೋಗಗಳನ್ನು ನಡೆಯಿಸಲಿಕ್ಕೆ ಮಾಡಿಕೊಂಡಂತಹ ಸಂಘಟನೆಯೇ ಸಹಕಾರವು; ಈ ತರಹದ ಸಂಸ್ಥೆಗಳೇ ಸಹಕಾರೀ ಸಂಘಗಳು.

ಜನಸಾಮಾನ್ಯರು ತಮ್ಮ ಉನ್ನತಿಯನ್ನು ಮಾಡಿಕೊಳ್ಳುವದಕ್ಕಾಗಿ ಸಹಕಾರೀ ಸಂಘಗಳು ಒಳ್ಳೇ ಮಾರ್ಗಗಳಾಗಿರುವವು. ಈ ಸಂಘಗಳು ತಮ್ಮ ಮುಂದೆ ಅತ್ಯಂತ ಉಚ್ಚ ತರಹದ ವಿಚಾರಗಳನ್ನು

ಇಟ್ಟುಕೊಳ್ಳತಕ್ಕದ್ದು; ಎಲ್ಲರಲ್ಲಿಯೂ ಸಮಭಾವನೆಯನ್ನಿಡಬೇಕು; ಎಲ್ಲ ಸಭಾಸದರು ಒಂದೇ ಎಂದು ತಿಳಿದುಕೊಂಡು ಉಚ್ಚ ನೀಚ ಭಾವನೆಯನ್ನು ಮನಸ್ಸಿನಲ್ಲಿ ತರಬಾರದು; ಪ್ರತಿಯೊಬ್ಬ ಸದಸ್ಯರು ಸಂಘವು ತಮ್ಮದೇ ಎಂದು ನಂಬಿ ಅದರ ಹೆಚ್ಚಳಕ್ಕಾಗಿ ಪ್ರಯತ್ನಿಸ ಬೇಕು; ಸಂಘದ ಪ್ರತ್ಯೇಕ ವ್ಯವಹಾರದಲ್ಲಿ ಜನರ ಅಧಿಕಾರ ವಿರುತ್ತ ದೆಂಬುದನ್ನು ನಿದರ್ಶನಕ್ಕೆ ತರಬೇಕು; ಯಾವದಕ್ಕೆ ಪ್ರಜಾಪ್ರಭುತ್ವ ಲೋಕಸತ್ತೆಯೆಂದು ಅನ್ನುವರೋ ಅದರ ನಿಜಸ್ವರೂಪವು ಸಹಕಾರೀ ಸಂಘಗಳಲ್ಲಿ ಕಂಡುಬರಲಿಕ್ಕೆ ಬೇಕು. ಸಹಕಾರೀ ಸಂಸ್ಥೆಗಳು, ಸಮಾಜದ ಸೇವೆಮಾಡುವದು, ಅವರ ಗರಜುಗಳನ್ನು ದೂರಮಾಡು ವದು, ಈ ಮೊದಲಾದ ಸಂಗತಿಗಳು ತಮ್ಮ ಕರ್ತವ್ಯವೆಂದು ತಿಳಿಯ ಬೇಕು. ಈ ಕರ್ತವ್ಯಬುದ್ಧಿಯು ಇಲ್ಲದಿದ್ದರೆ ಮಾತ್ರ ಸಹಕಾರೀ ಸಂಘಗಳ ಉದ್ದೇಶವು ಸಿದ್ಧಿಗೆ ಹೋಗುವದಿಲ್ಲ; ಸಹಕಾರೀ ಸಂಸ್ಥೆ ಗಳು ವ್ಯಾಪಾರಮಾಡಿ ಲಾಭಗಳಿಸುವದಕ್ಕಾಗಿ ನಿರ್ಮಾಣವಾಗಿರುವ ದಿಲ್ಲ; ಅವುಗಳ ಉದ್ದೇಶವು ಕೇವಲ ಲಾಭ ದೊರಕಿಸುವದಿರುವದಿಲ್ಲ. ಲೋಕ ಸೇವೆಯೇ ಅವುಗಳ ಧ್ಯೇಯವಿರಬೇಕು.

## ಸಂಘಗಳ ಆಡಳಿತವು

ಇತ್ತೀಚೆಗೆ ಸಹಕಾರೀ ಸಂಘಗಳು ಬಹುಸಂಖ್ಯಾಕವಾಗಿ ಸ್ಥಾಪಿ ಸಲ್ಪಡಹತ್ತಿರುವದರಿಂದ ಅವುಗಳ ಘಟನೆಯ ಬಗ್ಗೆ ಪ್ರತಿಯೊಬ್ಬರಿಗೆ ಗೊತ್ತಿರಲಿಕ್ಕೆಬೇಕು. ಅವುಗಳ ಜವಾಬುದಾರಿಯು ಗೊತ್ತಿರದ ಮೂಲಕ ಸಂಘಗಳ ವ್ಯವಹಾರದಲ್ಲಿ ಶಿಥಿಲತೆಯು ಉತ್ಪನ್ನವಾಗಿ ಆಡ ಳಿತೆಯು ಕುಶಿದುಬೀಳುವದು. ಸಂಘದ ವ್ಯವಹಾರವನ್ನು ಸಾಗಿಸ ಲಿಕ್ಕೆ ಒಂದು ಕಾರ್ಯಕಾರೀ ಮಂಡಳಿಯನ್ನು ಆರಿಸುವದರಲ್ಲಿ ಬರು ವದು. ಈ ಕಾರ್ಯಕಾರೀ ಮಂಡಳದ ಕೆಲಸವನ್ನು ನಡೆಸಲಿಕ್ಕೆ ಅಧ್ಯಕ್ಷ-ಚೇಅರಮನ್ನರೆಂದು ಒಬ್ಬರನ್ನು ಆರಿಸುತ್ತಾರೆ. ಸಂಘದ

ಲೆಕ್ಕ ಪತ್ರಗಳನ್ನು ಬರೆಯಲಿಕ್ಕೆ ಗೊತ್ತುಪಡಿಸಿದವನಿಗೆ ಸೆಕ್ರೆಟರಿ ಎಂದು ಅನ್ನುವರು.

**ಚೇಅರಮನ್** : ವ್ಯವಸ್ಥಾಪಕ ಕಮೀಟಿಯ ಸಭೆಗಳನ್ನು ನಡೆಯಿಸುವದು, ಸಂಘದ ಲೆಕ್ಕಪತ್ರಗಳನ್ನು ವ್ಯವಸ್ಥಿತ ರೀತಿಯಿಂದ ಇಟ್ಟಿರುವದೋ ಇಲ್ಲೋ ಎಂಬದನ್ನು ನೋಡುವದು, ಸಂಘದ ಶಿಲ್ಕು ಹಣವನ್ನು ರಕ್ಷಿಸುವದು; ಮತ್ತು ಸಂಘದ ವ್ಯವಸ್ಥೆಯ ಸಂಬಂಧವಾಗಿ ಎಲ್ಲ ವ್ಯವಹಾರವನ್ನು ಕಮಿಟಿಯ ಠರಾವಿನಂತೆ ನಿಕಾಲೆ ಮಾಡುವದು ಈ ಮೊದಲಾದ ಎಲ್ಲ ಕೆಲಸದ ಜವಾಬುದಾರಿಯು ಚೇಅರಮನ್ನರ ಮೇಲಿರುವದು. ಚೇಅರಮನ್ನರಿಗೆ ಸಭೆಯ ಕಾಲಕ್ಕೆ ತಮ್ಮ ಸ್ವಂತದ ಮತವಲ್ಲದೆ ಮತ್ತೊಂದು ನಿರ್ಣಾಯಕ ಮತು ( Casting Vote ) ವಿರುತ್ತದೆ. ಚೇಅರಮನ್ನರು ನಿಸ್ಪೃಹಿಗಳೂ, ವರ್ತನದಿಂದ ನೆಟ್ಟಗಿದ್ದವರೂ ಇದ್ದರೆ ಸಂಘದ ಕಾರ್ಯವು ಅತ್ಯುತ್ತಮರೀತಿಯಿಂದ ನಡೆಯುತ್ತದೆ. ಸಂಘದ ಏರಿಳಿತಗಳು ಮುಖ್ಯವಾಗಿ ಚೇಅರಮನ್ನರನ್ನು ಅವಲಂಬಿಸಿರುತ್ತವೆ. ದುಡ್ಡಿನ ವ್ಯವಹಾರದ ಸಂಪೂರ್ಣ ಜವಾಬುದಾರಿಯು ಚೇಅರಮನ್ನರ ಮೇಲಿರುವದರಿಂದ ಅವರು ಮನೆಯಿಂದ ಗಟ್ಟಿಗರಿರಬೇಕು; ಅವರಿಗೆ ಸಹಕಾರೀ ತತ್ವದ ಮತ್ತು ವ್ಯವಹಾರದ ಪೂರ್ಣ ಪರಿಚಯುವಿರಬೇಕು.

**ವ್ಯವಸ್ಥಾಪಕ ಸಭೆ** : ವ್ಯವಸ್ಥಾಪಕ ಸಭೆಗೆ ಪಂಚಸಭೆಯನ್ನುವರು. ಈ ಸಭೆಗೆ ಎಲ್ಲ ಅಧಿಕಾರಿಗಳು ಸಾಮಾನ್ಯ ಸಭೆಯಿಂದ ದೊರಕುವವು. ಆದಕಾರಣ ಸಾಮಾನ್ಯ ಸಭೆಯ ಸಲಹೆಯಂತೆ ಅದು ನಡೆಯಬೇಕಾಗುತ್ತದೆ. ಈ ಸಭೆಯವರು ಸಂಘದ ಎಲ್ಲ ಕೆಲಸಗಳನ್ನು ವ್ಯವಹಾರಸ್ಥನಂತೆ ಯೋಗ್ಯವಿಚಾರದಿಂದಲೂ ಜಾಗ್ರತೆಯಿಂದಲೂ ನಡೆಯಿಸತಕದ್ದು; ಕಾಯಿದೆ, ಕಾನೂನು ಹಾಗೂ ಪೋಟ ನಿಯಮಗಳನ್ನು ಉಲ್ಲಂಘಿಸಿ ಸಂಘಕ್ಕೆ ಪ್ರಾಪ್ತವಾದ ಹಾನಿಗೆ ಅವರು ಪಾತ್ರರಾಗುವರು.

ಸದಸ್ಯರ ಆರ್ಥಿಕ ಹಿತಸಾಧನೆಯೇ ಸಂಘದ ಉದ್ದೇಶವಿದ್ದುದ ರಿಂದ ಕಮಿಟಿ ಮೆಂಬರರು ತಮ್ಮ ಸ್ವಂತ ಅನೂಕೂಲಿಗಿಂತ ಇಂತಹ ಹಿತವನ್ನು ಹೆಚ್ಚು ಲಕ್ಷಿಸಿ ವರ್ತಿಸಬೇಕು. ಸಂಘದ ಮತ್ತು ಅದರ ಸದಸ್ಯರ ಹಿತವನ್ನು ಅವರಿಗೆ ಒಪ್ಪಿಸುವದರಿಂದ ಅವರು ಅದನ್ನು ಕಾಯುವದರಲ್ಲಿ ತತ್ಪರರಿರಬೇಕು. ಕಮಿಟಿ ಸಭೆಗಳಿಗೆ ಸುಮ್ಮ ಸುಮ್ಮನೆ ಮೇಲಿಂದ ಮೇಲೆ ತಪ್ಪಿಸುವಂತಹವರನ್ನು ಕಡಿಮೆಮಾಡಿ ಜನಹಿತವನ್ನು ಮಾಡಲುದ್ಯುಕ್ತರಿರುವ ಮೆಂಬರರನ್ನು ಕಮಿಟಿಯಲ್ಲಿ ತೆಗೆದುಕೊಳ್ಳಬೇಕು. ಸಹಕಾರೀ ಶೈಕ್ಷಣಿಕ ಮಹತ್ವವು ಕಮಿಟಿಯ ಮೆಂಬರರಲ್ಲಿ ಹೆಚ್ಚಾಗಿ ಕಂಡುಬರಬೇಕು. ಆಡಳಿತೆಯ ಕ್ರಮ, ಲೆಕ್ಕ ಪತ್ರಗಳ ಅರಿವು, ಒಕ್ಕಟ್ಟಿನಿಂದ ಕೆಲಸಮಾಡುವದು ಇರುವದಲ್ಲದೆ ಹಳ್ಳಿಯ ಮುಂದಾಳತ್ವದ ಬಗ್ಗೆ ಅವರಿಗೆ ತಕ್ಕ ಶಿಕ್ಷಣವೂ, ಅವಕಾಶ ಗಳೂ ಸಂಘದ ಕಾರ್ಯ ಮಾಡುವಾಗ ದೊರೆಯುವವು. ತಮ್ಮ ಒಡನಾಡಿಗಳ ಹಿತ ಮಾಡುವದು, ಅವರ ಜೀವನವನ್ನು ಸುಧಾರಿಸು ವದು, ಈ ಸಂಗತಿಗಳು ಮಾನವನ ಜೀವಿತದಲ್ಲಿ ಮಹತ್ವವಾದವುಗಳಿ ರುತ್ತವೆ. ಸಹಕಾರೀ ಸಂಘದ ಪ್ರತಿಯೊಬ್ಬ ಮೆಂಬರನು ಇತರರಿಗೆ ಸರಿಸಮಾನನೆಂದು ಇರುವಾಗ ಕಾರ್ಯನಿರ್ವಾಹಕ ಶಕ್ತಿಯು ಎಲ್ಲರ ಲ್ಲಿಯೂ ಒಂದೇ ಪ್ರಮಾಣದಲ್ಲಿರುವದು ಶಕ್ಯವಿಲ್ಲ. ಕಮೀಟಿ ಮೆಂಬ ರರನ್ನು ಪ್ರತಿವರುಷ ಬದಲು ಮಾಡುವದು ಯೋಗ್ಯವೆಂದು ಕೆಲವರ ಅಂಬೋಣವಿದೆ. ಹೀಗೆ ಮಾಡುವದರಿಂದ ನುರಿತ ಹಾಗೂ ಜಾಣ ರಾದ ಮೆಂಬರರ ಉಪಯೋಗವು ಸಂಘಕ್ಕೆ ಸಾಕಷ್ಟು ಸಿಗಲಾರದು. ಎಲ್ಲ ಯೋಗ್ಯ ಮೆಂಬರರಿಗೆ ಕಮಿಟಿಯಲ್ಲಿ ಆರಿಸಿ ಬರುವಂತೆ ಏರ್ಪಾ ಡಾಗುವದು ವಿಹಿತವು. ಈ ಬಗ್ಗೆ ಸ್ಪಷ್ಟವಾದ ಪ್ರತ್ಯೇಕ ನಿಯಮಗ ಳಿರುವದು ಶಕ್ಯವಿಲ್ಲ. ಕಮಿಟಿಯವರು ತಮ್ಮ ಅಧಿಕಾರಕ್ಕೊಳಪಟ್ಟು ಮಾಡಿದ ವ್ಯವಹಾರವನ್ನು ಮೆಂಬರ ಜನರಿಗೆ ನಿರಾಕರಿಸಲಿಕ್ಕೆ ಬರು ವದಿಲ್ಲ.

## ವ್ಯವಸ್ಥಾಪಕ ಕಮಿಟಿ ಮೆಂಬರನಾಗಲು ಅರ್ಹತೆಗಳು

(೧) ಸಂಘವು ಕೈಕೊಂಡ ವ್ಯವಹಾರವನ್ನೇ ಮಾಡುವಂತಹ ಜನರನ್ನು ಕಮಿಟಿಯಲ್ಲಿ ತೆಗೆದುಕೊಳ್ಳಬಾರದು.

(೨) ಸಂಘದ ನೌಕರನು ಮತ್ತು ಅವನ ಆಪ್ತೇಷ್ಟರು ಒಂದೇ ಸ್ಥಳದಲ್ಲಿ ಕೆಲಸಮಾಡಬೇಕಾದಲ್ಲಿ ಅಂತಹ ನೌಕರನ ಆಪ್ತೇಷ್ಟರನ್ನು ಕಮಿಟಿಗೆ ಆರಿಸಬಾರದು.

(೩) ಕಮಿಟಿಗೆ ಆರಿಸಲ್ಪಡತಕ್ಕ ಮೆಂಬರನು ಮನಸಾ ಸಹ ಕಾರಿಯಾಗಿರಬೇಕು.

(೪) ಕಮಿಟಿ ಮೆಂಬರನು ಸದಸದ್ವಿವೇಕವುಳ್ಳವನಿರಬೇಕು.

(೫) ತನ್ನ ಎಲ್ಲ ವ್ಯವಹಾರಗಳಲ್ಲಿ ಕಮಿಟಿಯ ಮೆಂಬರನು ಪ್ರಾಮಾಣಿಕನಿರತಕ್ಕದ್ದು.

(೬) ಕಮಿಟಿಯ ಮೆಂಬರನು ತನ್ನ ಸ್ವಾರ್ಥಕ್ಕಿಂತ ಸಂಘದ ಹಿತವನ್ನೇ ಮುಂದಿಟ್ಟುಕೊಳ್ಳಬೇಕು.

(೭) ಕಮಿಟಿಯ ಸಭಾಸದತ್ವಕ್ಕೆ ಯೋಗ್ಯನಿದ್ದವನನ್ನೇ ಆರಿಸಬೇಕು.

ಸಂಘದ ಉಪಯೋಗವನ್ನು ಯಾವತ್ತೂ ರೀತಿಯಲ್ಲಿ ತಮ್ಮ ಸಂಘದ ಸಭಾಸದರಿಗೆ ಯಾವ ಪ್ರಕಾರ ಮಾಡಿಕೊಡಬೇಕೆಂಬುದರ ಕಡೆಗೆ ಸತತ ಲಕ್ಷ್ಯವನ್ನಿಟ್ಟು ನಡೆಯುತ್ತ ಹೋದರೆ ಅದರಿಂದ ನಿಜವಾಗಿ ಒಳ್ಳೇ ಪರಿಣಾಮವಾಗುವದಲ್ಲದೆ ಸಂಘದ ಸಭಾಸದರಿಗೆ ಹೆಚ್ಚಿನ ಕಲ್ಯಾಣ ಮಾಡಿದಂತಾಗುವದು.

**ಸಾಮಾನ್ಯ ಸಭೆ**:- ಸಂಘದ ಅಂತಿಮ ಅಧಿಕಾರವು ಸಾಮಾನ್ಯ ಸಭೆಯ ಕೈಯಲ್ಲಿರುವದು. ಕಾಯಿದೆ ಮತ್ತು ನಿಯಮಗಳ ಮೂಲಕ

ಅದನ್ನು ಪ್ರತಿವರುಷ ನಿಶ್ಚಿತ ಕಾಲಕ್ಕೆ ಕೂಡಿಸುವದರ ವಿಷಯವಾಗಿಯೂ ಅದರಲ್ಲಿ ಚರ್ಚಿಸಲ್ಪಡತಕ್ಕ ವಿಷಯಗಳ ಬಗ್ಗೆಯೂ ನಿರ್ದಿಷ್ಟ ಮಾಡಿರುವದು. ಪೋಟ ನಿಯಮಗಳಲ್ಲಿ ಈ ಸಂಬಂಧವಾಗಿ ವಿಸ್ತೃತ ಮಾಹಿತಿಯು ಇರುವದು. ಸಾಮಾನ್ಯ ಸಭೆಯಂದರೆ ಸಂಘದ ಮೂರ್ತ ಸ್ವರೂಪದಂತಿರುವದು. ಅದು ತನ್ನ ಕೆಲಸವನ್ನು ಕಾಯಿದೆ, ಕಾನೂನುಗಳು ಮತ್ತು ಪೋಟ ನಿಯಮಗಳನ್ನನುಸರಿಸಿ ಮಾಡುವದಿರುತ್ತದೆ. ಪೋಟ ನಿಯಮಗಳನ್ನು ತಿದ್ದುವದಕ್ಕೆ ಅದಕ್ಕೆ ಅಧಿಕಾರವಿರುತ್ತದೆ. ಈ ನಿರ್ಬಂಧಗಳಿಗೊಳಪಟ್ಟು ಸಂಘವು ತನ್ನ ಎಲ್ಲ ಕೆಲಸಗಳನ್ನು ಮಾಡಿಕೊಳ್ಳುವದಕ್ಕೆ ಅಧಿಕೃತವಿರುವದು. ಸಾಮಾನ್ಯ ಸಭೆಯಲ್ಲಿ ಯಾವನೇ ಮೆಂಬರನು ಕಮಿಟಿಯ ಕೆಲಸಗಳ ವಿಷಯವಾಗಿ ಪ್ರಶ್ನೆ ಎತ್ತಬಹುದು. ಪ್ರತಿಯೊಬ್ಬ ಮೆಂಬರನು ಇತರರಿಗೆ ಸಮಾನನೂ ಸರಿಯಾದ ಹಕ್ಕುಳ್ಳವನೂ ಇರುವನು. ಸಾಮಾನ್ಯ ಸಭೆಯಂದರೆ ಯೋಗ್ಯ, ಪ್ರಾಮಾಣಿಕ ಉದ್ಯೋಗಪ್ರಿಯ ಮತ್ತು ಪರಸ್ಪರ ಸಹಾಯ ತತ್ಪರರಾದ ಮೆಂಬರರ ಸಮ್ಮೇಲನವಾಗಿರಬೇಕು. ಅವರೆಲ್ಲರು "ಒಬ್ಬನಿಗಾಗಿ ಎಲ್ಲರು, ಎಲ್ಲರಿಗಾಗಿ ಒಬ್ಬನು" ಎಂಬ ತತ್ವವನ್ನವಲಂಬಿಸಿ ತಮ್ಮ ಗರಜುಗಳನ್ನು ಹೋಗಲಾಡಿಸುವದಕ್ಕಾಗಿ, ಒಬ್ಬರಿಗೊಬ್ಬರ ನೆರವಿನಿಂದ ತಮ್ಮ ಜೀವನವನ್ನು ಸುಖಮಯವಾಗಿ ಮಾಡಿಕೊಳ್ಳಲು ಪ್ರಯತ್ನಿಸಬೇಕು.

ಜನರು ತಾವಾಗಿಯೇ ಸ್ವೇಚ್ಛೆಯಿಂದಲೇ ಸಹಕಾರಿಗಳಾಗುವರಲ್ಲದೆ ಜುಲುಮೆಯಿಂದ ಅವರನ್ನು ಸಹಕಾರಕ್ಕೆ ಪ್ರವರ್ತಿಸುವದು ಶಕ್ಯವಿರುವದಿಲ್ಲೆಂಬುದನ್ನು ನೆನಪಿನಲ್ಲಿಡತಕ್ಕದ್ದು. ಅದರಂತೆ ಮೆಂಬರರು ವಾರ್ಷಿಕ ಸಭೆಗಳಿಗೆ ಹಾಜರಿರುವಂತೆ ಅವರಲ್ಲಿ ಸ್ವಯಂ ಪ್ರೇರಣೆಯಾಗಬೇಕು. ಹಳ್ಳಿಗರು ಸಹಕಾರೀ ಸಂಘಗಳನ್ನು ಸೇರಿ ಪರಸ್ಪರರಿಗೆ ಸಹಾಯಕರಾಗಲೆಂದು ಪ್ರತಿಯೊಬ್ಬ ಹಿತ ಚಿಂತಕನ ಆಶೆ ಇರುವದು. ಪ್ರಾಮಾಣಿಕ ಹಾಗೂ ಉದ್ಯೋಗಪ್ರಿಯ ಮೆಂಬರನು

ಸಾಮಾನ್ಯ ಸಭೆಗೆ ಹಾಜರಾಗದೆ ಇದ್ದಮಾತ್ರಕ್ಕೆ ಅವನನ್ನು ಸಂಘ ದಿಂದ ದೂರುಮಾಡಬಾರದು. ಯಾಕಂದರೆ ಹಾಜರಾಗುವಂತೆ ಅವನ ಮನಸ್ಸು ಒಲಿಯದಿರಲಿಕ್ಕೆ ಸಂಘದ ಆಡಳಿತೆಯೊಳಗಿನ ಕುಂದು ಕೊರತೆಗಳು ಕಾರಣವಿರಬಹುದು. ಸಾಮಾನ್ಯ ಸಭೆಯಲ್ಲಿ ಸಂಘದ ಕಾರ್ಯವು ಬಲ್ಲವರಿಗೆ ಮಾತ್ರವಲ್ಲದೆ ಎಲ್ಲರಿಗೂ ತಿಳಿಯುವಂತೆ ವ್ಯವಸ್ಥೆಯಾಗತಕ್ಕದ್ದು. ಸಭೆಯಲ್ಲಿ ಸಂಘದ ಕೆಲಸಕ್ಕೆ ಸಂಬಂಧಿಸಿದ ವಿಷಯಗಳನ್ನಷ್ಟೇ ಚರ್ಚಿಸಬೇಕಲ್ಲದೆ ಸಂಬಂಧವಿರದ ಧಾರ್ಮಿಕ ಹಾಗೂ ರಾಜಕೀಯ ವಿಷಯಗಳನ್ನು ಚರ್ಚಿಸಬಾರದು.

**ಸೆಕ್ರೆಟರಿ:-** ಯಾವದೇ ಒಂದು ಸಂಸ್ಥೆಯು ಉತ್ತಮರೀತಿಯಿಂದ ನಡೆಯಬೇಕಾದರೆ ಅದರ ಲೆಕ್ಕ ಪತ್ರಗಳು ಚೊಕ್ಕಟವಾಗಿರಲಿಕ್ಕೆಬೇಕು. ಅವುಗಳನ್ನು ವೇಳೆಗೆ ಸರಿಯಾಗಿ ಒಳ್ಳೇ ಅಕ್ಷರಗಳಿಂದ ಪ್ರಾಮಾಣಿಕತನಕ್ಕನುಸರಿಸಿ ಬರೆಯಲ್ಪಡಬೇಕು. ಬಹು ಜನ ಸಮಾಜದ ವಿಶ್ವಾಸವನ್ನು ಸಂಪಾದನೆಮಾಡಬೇಕೆಂಬ ಇಚ್ಛೆ ಇದ್ದರೆ ಆ ಸಂಸ್ಥೆಯ ಲೆಕ್ಕ ಪತ್ರಗಳನ್ನು ಮೇಲೆ ಹೇಳಿದ ತತ್ವಗಳಿಗೆ ಸರಿಯಾಗಿ ಬರೆಯಬೇಕು. ಇದು ಸಹಕಾರೀ ಸಂಘಗಳಲ್ಲಿ ಅತ್ಯಂತ ಮಹತ್ವವುಳ್ಳದ್ದಾಗಿರುತ್ತದೆ. ಯಾಕಂದರೆ ಸಂಘದ ಸಭಾಸದರಲ್ಲಿ ಸಾಧಾರಣವಾಗಿ ಅಶಿಕ್ಷಿತ ಜನರ ಪ್ರವೇಶವಾಗುತ್ತಿರುವ ಮೂಲಕ ಅವರ ಹಿತಸಮ್ಮಂಧಗಳಿಗೆ ಯಾವರೀತಿಯಿಂದಾದರೂ ಕುಂದು ಬಾರದ ಹಾಗೆ ಪ್ರಯತ್ನಮಾಡಬೇಕು. ಕಾಗದ ಪತ್ರಗಳ ಜವಾಬದಾರಿಯು ಸೆಕ್ರೆಟರಿಯ ಮೇಲಿರುವ ಕಾರಣ ಪ್ರತಿಯೊಂದು ದಾಖಲೆನ್ನು ವೇಳೆವೇಳೆಗೆ ಮತ್ತು ಪ್ರಾಮಾಣಿಕತನದಿಂದ ಬರೆಯುವದು ಸೆಕ್ರೆಟರಿಯ ಮುಖ್ಯ ಕರ್ತವ್ಯವಾಗಿರುತ್ತದೆ.

ಸೆಕ್ರೆಟರಿಯು ಸ್ವತಃ ಉಳಿದ ಸಭಾಸದರಿಗಿಂತ ಹೆಚ್ಚಿಗೆ ಸುಶಿಕ್ಷಿತನಿರುವ ಮೂಲಕ ಅವನ ಮೇಲೆ ವಿಶೇಷ ಜವಾಬುದಾರಿಯು ಇರು

ತ್ತದೆ ಅವನು ಒಳ್ಳೇ ನಡತೆಯವನಿರಬೇಕು. ಸೆಕ್ರೆಟರಿಗಳ ದುರ್ನಡತೆಯ ಮೂಲಕ ಎಷ್ಟೋ ಸಂಘಗಳು ಪತ್ತನ್ನು ಕಳೆದುಕೊಂಡಿರುವವು. ಸಂಘದ ಉಚ್ಚ ನೀಚ ಸ್ಥಿತಿಗೆ ಸೆಕ್ರೆಟರಿಯು ಬಹಳೇ ಜವಾಬುದಾರನಿರುವನು.

ಕಾಯಿದೆಯಲ್ಲಿ ಇಲ್ಲವೇ ಕಾನೂನುಗಳಲ್ಲಿ ಸೆಕ್ರೆಟರಿಯ ನೇಮಣೂಕಿಯ ವಿಷಯವಾಗಿ ಉಲ್ಲೇಖವಿರುವದಿಲ್ಲ. ಲೆಕ್ಕ ಪತ್ರಗಳನ್ನಿಡುವದು, ಕಮಿಟಿಯ ಠರಾವುಗಳನ್ನು ಬರೆಯುವದು ಈ ಮೊದಲಾದ ಕೆಲಸಗಳಿಗಾಗಿ ಒಬ್ಬನ ಅವಶ್ಯಕತೆಯೆನಿಸುವದು; ಹಾಗೂ ಈ ಕೆಲಸಗಳನ್ನು ಒಬ್ಬನೇ ಮಾಡುವದು ವಿಹಿತವು. ಇದಕ್ಕಾಗಿ ಒಬ್ಬನನ್ನು ಕಮಿಟಿಯ ಕೈಕೆಳಗೆ ಇಡುವದು ವಾಡಿಕೆಯಾಗಿದೆ. ಅವನು ಸಂಘದ ಮೆಂಬರನಿರುವದಕ್ಕೆ ಪ್ರತಿಬಂಧವಿರುವದಿಲ್ಲ. ಅವನು ಪಗಾರೀ ನೌಕರನಿದ್ದಲ್ಲಿ ಅವನು ಮೆಂಬರನಿರುವದು ಸರಿಯಲ್ಲ. ಪಗಾರೀ ಸೆಕ್ರೆಟರಿಯು ಒಮ್ಮೊಮ್ಮೆ ಹೆಚ್ಚಿಗೆ ಪ್ರತಿಷ್ಠನಾಗುವಹಾಗೆ ಕಮಿಟಿಯ ಅಧಿಕಾರಗಳನ್ನು ತನ್ನಲ್ಲಿ ಕೇಂದ್ರೀಕರಿಸುವ ಸಂಭವವಿರುವದು. ಆದುದರಿಂದ ಸೆಕ್ರೆಟರಿಗೆ ಒಪ್ಪಿಸತಕ್ಕ ಕಾರ್ಯ ಹಾಗೂ ಅವನಿಗೆ ಇರುವ ಅಧಿಕಾರಗಳು ಸಾಮಾನ್ಯ ಸಭೆಯ ಗೊತ್ತುವಳಿಗಳಿಂದಲೇ ಸ್ಪಷ್ಟವಾಗಿ ನಿರ್ದಿಷ್ಟಗೊಳಿಸತಕ್ಕದ್ದು.

**ಸಭಾಸದರು**:- ಪ್ರಾರಂಭಕ್ಕೆ ಸಂಘದ ಸಭಾಸದರು ಸಂಘದ ವ್ಯವಹಾರಗಳ ಬಗ್ಗೆ ತಿಳಿದುಕೊಳ್ಳಬೇಕು. ಯಾವ ತತ್ವದ ಮೇಲೆ ಸಂಘವನ್ನು ನಡೆಯಿಸಬೇಕೆಂಬುದನ್ನು ಪ್ರತಿಯೊಬ್ಬ ಸಭಾಸದನು ಗೊತ್ತು ಪಡಿಸಿಕೊಳ್ಳತಕ್ಕದ್ದು. ತಾವು ಆರಿಸಿದ ವ್ಯವಸ್ಥಾಪಕ ಕಮಿಟಿಯ ಮೆಂಬರರು ತಮ್ಮ ಕೆಲಸವನ್ನು ಚನ್ನಾಗಿ ಸಾಗಿಸಿರುವರೋ ಇಲ್ಲೋ ಎಂಬುದರ ಮೇಲೆ ಸಭಾಸದರು ದಕ್ಷತೆಯ ಲಕ್ಷ್ಯವನ್ನಿಡಬೇಕು. ಅದರಂತೆ ಸಂಘದ ಶೇಅರಮನ್ನರು ಶಿಲ್ಕು ಹಣದಲ್ಲಿ ಹೆಚ್ಚು

ಕಡಿಮೆ ಮಾಡುವರೋ ಹೇಗೆಂಬುದನ್ನು ನೋಡಬೇಕು. ಸೆಕ್ರೆಟರಿಯ ಕಡೆಯಿಂದ ಲೆಕ್ಕಪತ್ರಗಳ ಕೆಲಸವು ನಿರ್ದೋಷದಿಂದ ನಡೆಯುತ್ತಿರುವಬಗ್ಗೆ ನೋಡಬೇಕು. ಸ್ವಲ್ಪದರಲ್ಲಿ ಹೇಳುವದೆಂದರೆ ವ್ಯವಸ್ಥಾಪಕ ಕಮಿಟಿ, ಚೇರಮನ್, ಸೆಕ್ರೆಟರಿ ಇವರು ತಮ್ಮ ತಮ್ಮ ಕೆಲಸಗಳನ್ನು ಉತ್ತಮರೀತಿಯಿಂದ ಸಾಗಿಸಿರುವರೋ ಹೇಗೆಂಬುದರ ಕಡೆಗೆ ಪ್ರತಿಯೊಬ್ಬ ಸಭಾಸದನ ಲಕ್ಷ್ಯವು ಇರಬೇಕು. ಸಂಘದ ವ್ಯವಹಾರವು ಎಲ್ಲರಿಗೂ ಲಾಭದಾಯಕವಾಗಿ, ಅದರಲ್ಲಿ ಯಾವ ಪ್ರಕಾರದ್ದೂ ಕಪಟತನವಿರದಂತೆ ನೋಡಿಕೊಳ್ಳಬೇಕು. ಸಂಘದ ಸಭಾಸದರು ಜವಾಬುದಾರಿಯನ್ನು ಹೊರುವದಿರುವದರಿಂದ ಅವರ ಒಂದು ಯಾದಿಯನ್ನು ತಯಾರಿಸಿಡತಕ್ಕದ್ದು. ಯಾಕೆಂದರೆ ಯಾವನೊಬ್ಬನಿಗೆ ಜವಾಬುದಾರಿಯನ್ನು ಹೊತ್ತುಕೊಳ್ಳಲು ಹೇಳಿದರೆ ಅವನು ಯಾರಸಂಗಡ ಅದನ್ನು ಹೊರಬೇಕೆಂಬುದನ್ನು ತಿಳಿದುಕೊಳ್ಳಬೇಕಾಗುವದು. ಇಂತಹ ಯಾದಿಯು ಉಪಯುಕ್ತವಾಗಬೇಕಾದರೆ ಅದು ಗಟ್ಟಿಮುಟ್ಟಾಗಿರತಕ್ಕದ್ದು. ಎರಡನೇಯವರು ಸಂಘಕ್ಕೆ ಹಣ ಪೂರೈಸಬೇಕಾದಲ್ಲಿ ತಮ್ಮ ಹಣಕ್ಕೆ ಜವಾಬುದಾರರಿರುವ ಸ್ಥಿತಿಯನ್ನು ಹಾಗೂ ಅವರು ಅದನ್ನು ಪಾರುಗಾಣಿಸಲಿಕ್ಕೆ ಬಾಧ್ಯರಿರುವರೆಂಬದನ್ನು ತಿಳಿದುಕೊಳ್ಳುವದು ಸಹಜವು. ಆದುದರಿಂದ ಮೆಂಬರತನವನ್ನು ಬಿಟ್ಟವನ ಜವಾಬುದಾರಿಯನ್ನು ಮೃತಪಟ್ಟ ಮೆಂಬರನ ಆಸ್ತಿಯ ಜವಾಬುದಾರಿಯನ್ನು ಆ ತಾರೀಖಿಗೆ ಇದ್ದ ಸಾಲದ ಮಟ್ಟಿಗೆ ಎರಡು ವರುಷಗಳ ತನಕ ವಿಧಿಸಿರುತ್ತದೆ. ಇದು ನ್ಯಾಯವೂ ವ್ಯಾವಹಾರಿಕವೂ ಆಗಿದೆ. ಮೆಂಬರನಾಗುವವನಿಗೆ ಆಸ್ತಿ ಇರಬೇಕೆಂಬ ಶರ್ತು ಇರುವದಿಲ್ಲ. ಆದರೆ ಅವನಲ್ಲಿ ಗುಣಗಳಿರಬೇಕಾಗುವದು. **ಸಹಕಾರದಲ್ಲಿ ಆಸ್ತಿಗಿಂತ ಸದ್ಗುಣಗಳ ಭದ್ರತೆಯು ಹೆಚ್ಚು ಮಹತ್ವದ್ದಾಗಿ ಎಣಿಸಲ್ಪಡುತ್ತದೆ.** ಸದ್ಗುಣಗಳ ಅಭಾವವಿದ್ದ ಸಂಗತಿಯಲ್ಲಿ ಸಂಘಗಳು ಯಶಸ್ವಿಯಾಗಿಲ್ಲ. ಸಂಘಗಳ ಯಶಸ್ಸು ಗುಣಗಳನ್ನೇ ಅವಲಂಬಿ

ಸಿದೆ. ಪ್ರತಿಯೊಬ್ಬ ಸಭಾಸದನು ತನ್ನ ಜವಾಬುದಾರಿಯನ್ನು ಪೂರ್ಣವಾಗಿ ತಿಳಿದುಕೊಂಡು, ಭಿಡೆ ಮುರವತ್ತುಗಳಿಗೆ ಒಳಗಾಗದೆ, ನ್ಯಾಯದ ನಡತೆಯನ್ನು ಬಿಡದಂತೆ ವರ್ತಿಸುತ್ತ ಹೋದರೆ ಸಂಘವು ತುಸು ದಿವಸಗಳಲ್ಲಿಯೇ ಉತ್ಕರ್ಷವನ್ನು ಹೊಂದುತ್ತದೆ.

## Celeberation of Cooperators' Day

## ೨೦. ಸಹಕಾರೀ ದಿನಾಚರಣೆಯ ಸಮಾರಂಭವು

ಸಹಕಾರೀ ಚಳವಳಿಯು ಈ ಪ್ರಪಂಚದ ಎಲ್ಲ ಮುಂದುವರೆದ ರಾಷ್ಟ್ರಗಳಲ್ಲಿ ಪ್ರಸಾರವಾಗಿ ಪ್ರಗತಿಯನ್ನು ಹೊಂದಿರುತ್ತದೆ. ಸಹಕಾರಿಗಳ ಪರಸ್ಪರ ಪ್ರೀತಿ ಆದರಗಳನ್ನು ಬೆಳೆಯಿಸುವಂತೆಯೂ, ಉಪಯುಕ್ತ ವ್ಯವಹಾರಗಳನ್ನು ನಡೆಯಿಸುವಂತೆಯೂ ಅನೇಕ ಸಂಸ್ಥೆಗಳು ನಿರ್ಮಾಣವಾಗಿರುವಂತೆ ಇಡೀ ಜಗತ್ತಿನ ಸಹಕಾರಿಗಳ ವತಿಯಿಂದ ಮುಖ್ಯವೆನಿಸುವ ಒಂದು "ಅಂತರ್ರಾಷ್ಟ್ರೀಯ ಸಹಕಾರೀ ಸಂಸ್ಥೆಯು" (Inter National Coperative Alliance) ನಿರ್ಮಿತವಾಗಿರುತ್ತದೆ. ಇದು ಅಂತರಾಷ್ಟ್ರೀಯ ಪರಿಷತ್ತು ಮೊದಲಾದ ಸಭೆಗಳನ್ನು ಕರೆಯುವದಲ್ಲದೆ ಇಡೀಪ್ರಪಂಚದಲ್ಲಿರುವ ಸಹಕಾರೀ ಸಾಮ್ರಾಜ್ಯದ ಮಹತ್ವದ ಪ್ರಶ್ನೆಗಳನ್ನು ಸುಲಭರೀತಿಯಿಂದ ಬಿಡಿಸಲು ಪ್ರಯತ್ನಮಾಡುತ್ತದೆ. ಈ ಸಂಸ್ಥೆಯ ಪ್ರಕಟನೆಗಳಿಗೆ ಎಲ್ಲ ಸಹಕಾರಿಗಳು ಮನ್ನಣೆಯನ್ನೀಯುವರು. ಇದರ ವಿದ್ಯಮಾನ ಎಲ್ಲ ದೇಶಗಳ ಸಹಕಾರಿಗಳು ಕೂಡಿ, ಸಹಕಾರ ಪ್ರೀತ್ಯರ್ಥ ಪ್ರತಿವರ್ಷದೊಳಗೊಂದು ದಿನವನ್ನು ಹಬ್ಬದಂತೆ ಪಾಲಿಸಬೇಕೆಂದು ಪ್ರಕಟಿಸಿದನಂತರ ಸನ್ ೧೯೨೨ ನೇ ಇಸ್ವಿಯಿಂದ ಎಲ್ಲ ದೇಶಗಳಲ್ಲಿಯೂ ಪ್ರತಿವರುಷ ಜುಲೈ ಮೊದಲನೇ ಶನಿವಾರ, ಸಹಕಾರೀ ದಿವಸವೆಂದು ಪಾಲಿಸಹತ್ತಿರುತ್ತಾರೆ. ಈ ದಿವಸ ಸಹಕಾರಿಗಳು ಒಟ್ಟುಗೂಡಿ, ಸಹಕಾರದ ಮುಖ್ಯ ತತ್ವಗಳನ್ನು ಪ್ರಚಾರಗೊಳಿಸಿ, ಸಹಕಾರ ಪ್ರಗತಿಯ ಅಭಿ

ಮಾನ ಕಾಯುವದು, ಜಗತ್ತಿನ ಕಲ್ಯಾಣಕ್ಕಾಗಿ ಮುಂದಿನ ದೋರಣೆಯನ್ನು ನಿಶ್ಚಿತಗೊಳಿಸುವದು ಹಾಗೂ ಶಾಂತತೆಯು ನೆಲೆಗೊಳ್ಳುವಂತೆ ಜನತೆಯಲ್ಲಿ ಉತ್ಸಾಹವನ್ನೂ ಸರಕಾರದಲ್ಲಿ ಜವಾಬುದಾರಿಯನ್ನೂ ಹೆಚ್ಚಿಸಲಿಕ್ಕೆ ಪ್ರಯತ್ನಿಸುತ್ತಿರುತ್ತದೆ.

ಸಹಕಾರೀ ಚಳವಳಿಯು ರಾಷ್ಟ್ರೀಯ ಹಾಗೂ ಅಂತರ್ರಾಷ್ಟ್ರೀಯ ಚಳವಳಿಯಾಗಿರುತ್ತದೆ. ಅದರ ಮೆಂಬರತನವು ವ್ಯವಹಾರವು ಹಾಗೂ ಉತ್ಸಾಹವು ಬೆಳೆಯುತ್ತಲಿದ್ದು ಜಗತ್ತಿನ ಪ್ರತಿಯೊಂದು ಸುಧಾರಿಸಿದ ರಾಷ್ಟ್ರದಲ್ಲಿ ಅದರ ಮಹತ್ವವು ಕಂಡುಬರುತ್ತಲಿದೆ. ನ್ಯಾಯಪ್ರಿಯತೆ, ಸರಿಸಮಾನತ್ವ ಹಾಗೂ ವಿಶ್ವ ಬಂಧುತ್ವ ಈ ತತ್ವಗಳ ಮೇಲೆ ಪ್ರತಿಯೊಬ್ಬ ನಾಗರಿಕನು ತನ್ನ ಬಾಂಧವರ ಕೂಡ ಸಹಕಾರಮಾಡಿ ಸಮಾಜದಲ್ಲಿ ರೂಢವಾಗಿರುವ ಅನೀತಿಕಾರಕ ನಡತೆಗಳನ್ನು ದೂರಮಾಡಲಿಕ್ಕೆ ಅಧಿಕಾರಪಟ್ಟಿರಬೇಕೆಂಬುದು ಈ ಚಳವಳಿಯ ಧ್ಯೇಯವಾಗಿರುತ್ತದೆ.

ಸಹಕಾರೀ ಚಳವಳಿಯು ಪ್ರತಿಯೊಂದು ದೇಶದ ಪ್ರಜೆಗಳ ಆರ್ಥಿಕ ಸೌಕರ್ಯಗಳಿಗೆ ಅಡ್ಡಬರುವ ಯಾವತ್ತೂ ತೊಂದರೆಗಳನ್ನು ದೂರಮಾಡುವದು, ರಾಷ್ಟ್ರಗಳಲ್ಲಿ ಆರ್ಥಿಕ ಸಹಕಾರವನ್ನು ಹೆಚ್ಚಿಸುವದು, ನೈಸರ್ಗಿಕವಾದ ರೀತಿಯಲ್ಲಿ ಜಗತ್ತಿನ ಶಾಂತತೆಯನ್ನು ಸ್ಥಾಪಿಸುವದು ಇವೇ ಮೊದಲಾದವುಗಳ ಬಗ್ಗೆ ಪ್ರಯತ್ನವನ್ನು ಮಾಡುತ್ತಿರುತ್ತದೆ.

ಸಂಘಟಿತ ಶಕ್ತಿಯನ್ನು ಹೆಚ್ಚಿಸುವದಕ್ಕೆ, ಮಾನವೀ ಜೀವನವನ್ನು ಸುಧಾರಿಸುವದಕ್ಕೆ ಹಾಗೂ ಸಂಸ್ಕೃತಿಯನ್ನು ಬಲಪಡಿಸುವದಕ್ಕೆ ಅಂದರೆ ಒಟ್ಟಿದ ಮೇಲೆ ಸಹಕಾರ ಸಾಮ್ರಾಜ್ಯ (Cooperative Commonwealth) ವನ್ನು ಸ್ಥಾಪಿಸುವದಕ್ಕೆ ಸಹಕಾರ ಪುನಿರ್ಮಾಣವಾಗಿರುವದೆಂದು ನಮ್ಮೆಲ್ಲ ಸಹಕಾರಿಗಳ ಪ್ರತಿಪಾದನೆಯಾಗಿದೆ.

ಸರಕಾರದವರು ನಮಗಾಗಿ ಮಾಡಿಕೊಟ್ಟಿರುವ ಸಹಕಾರೀ ಕಾಯಿದೆಯ ಉದ್ದೇಶವು ಸಹ ಇದೇ ಇರುತ್ತದೆ. ಸನ್ ೧೯೨೫ನೇ ಇಸ್ವಿಯ ಮುಂಬಯಿ ಸಹಕಾರೀ ಕಾಯಿದೆಯ ಪೀಠಿಕೆಯಲ್ಲಿ (Preamble) ಇವೇ ತತ್ವಗಳು ಅಡಕವಾಗಿರುತ್ತವೆ. ಹೆಚ್ಚು ಒಳ್ಳೇ ಜೀವನವನ್ನೂ, ಹೆಚ್ಚು ಒಳ್ಳೇ ವ್ಯಾಪಾರವನ್ನೂ, ಹೆಚ್ಚು ಒಳ್ಳೇ ಉತ್ಪಾದಕ ಪದ್ಧತಿಗಳನ್ನುಂಟುಮಾಡುವ ಹಾಗೆ ಒಕ್ಕಲಿಗರೊಳಗೆ, ಹಾಗೂ ಒಂದೇ ತರಹದ ಆರ್ಥಿಕ ಗರಜುಗಳಿರುವಂತಹ ಇತರ ಜನರೊಳಗೆ ಮಿತವ್ಯಯ, ಸ್ವಾವಲಂಬನ ಮತ್ತು ಪರಸ್ಪರ ಸಹಾಯದ ವೃದ್ಧಿಯ ಬಗ್ಗೆ ಸಹಕಾರೀ ಸಂಘಗಳನ್ನು ಸ್ಥಾಪಿಸುವದಿರುತ್ತದೆ ಸಹಕಾರೀ ಚಳವಳಿಯು ಬರೀ ಆರ್ಥಿಕ ಲಾಭವನ್ನು ಒದಗಿಸಿಕೊಳ್ಳುವದಕ್ಕಾಗಿರದೆ ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿರುವ ಜನತೆಯ ಸ್ಥಿತಿಯನ್ನು ಸುಧಾರಿಸುವದಕ್ಕೆ ಉಪಯುಕ್ತವಾಗಿರುತ್ತದೆಂದು ಹೇಳಲಾಗುತ್ತದೆ.

ಇನ್ನು ಈ ಸಹಕಾರೀ ದಿನವನ್ನು ಪಾಲಿಸುವ ಬಗ್ಗೆ ನಾವು ಹೀಗೆ ಒಟ್ಟುಗೂಡಿ ವಿಶ್ವಬಂಧುತ್ವವನ್ನು Universal Brotherhood ಪ್ರಕಟಿಸಲಿಕ್ಕೂ, ಐಕ್ಯಭ್ರಾತೃತ್ವ ಹಾಗೂ ಸ್ವಾವಲಂಬನದ ತತ್ವಗಳನ್ನು ಅಂಗೀಕರಿಸುವದಕ್ಕೂ ಮಾರ್ಗವಾಗಿರುತ್ತದೆ. ಇದರಂತೆ ಸನ್ ೧೯೨೫ನೇ ಇಸ್ವಿಯಿಂದ ಸಹಕಾರೀ ದಿನವನ್ನು ಆಚರಿಸುತ್ತಲಿರುತ್ತೇವೆ. ಹಿಂದುಸ್ತಾನದಲ್ಲಿ ಸಹಕಾರೀ ಚಳವಳಿಯು ಪ್ರಕಟವಾಗಿ ಇಂದಿಗೆ ಸುಮಾರು ನಾಲ್ವತ್ತೈದು ವರುಷಗಳಾಗುತ್ತ ಬಂದವು. ಸನ್ ೧೯೪೯ನೇ ಇಸ್ವಿಯಿಂದ ಸಹಕಾರೀ ದಿನವನ್ನು ಪಾಲಿಸುವ ತಾರೀಕನ್ನು ನಮ್ಮ ದೇಶಕ್ಕೆ ಅನುಗುಣವಾಗುವಂತೆ ನವ್ಹಂಬರ ತಿಂಗಳ ಮೊದಲನೇ ಶನಿವಾರವನ್ನು ಗೊತ್ತುಮಾಡಿರುತ್ತಾರೆ. ಇದಕ್ಕೆ ಅಖಿಲಭಾರತೀಯ ಸಹಕಾರೀ ದಿನವೆನ್ನುವರು. ಜುಲೈ ತಿಂಗಳು ಮಳೆಗಾಲವಿರುವದರಿಂದ ಸಹಕಾರಿ ಬಾಂಧವರು ತಮ್ಮ ತಮ್ಮ ಉದ್ಯೋಗಗಳಲ್ಲಿ ತೊಡಗಿರುವದರಿಂದ ತೊಂದರೆಯಾಗುವ ಮೂಲಕ ಈ ಬದಲಾವಣೆಯನ್ನು ಮಾಡಲಾಗಿದೆ.



# ಸಹಕಾರೀ ವಚನಗಳು

## (Co-operative Sayings)

೧ ಒಗ್ಗಟ್ಟೇ ಸಹಕಾರ ಪದ್ಧತಿಯ ಮೂಲ ಮಂತ್ರ; ಒಬ್ಬನಿಗಾಗಿ ಎಲ್ಲರೂ, ಎಲ್ಲರಿಗಾಗಿ ಒಬ್ಬನೂ ಹಂಬಲಿಸಿ ದುಡಿಯುವದೇ ಸಹಕಾರದ ಪರಮೋದ್ದೇಶ.

೨ ಸಹಕಾರ ಪದ್ಧತಿಯ ಮೂಲ ತತ್ವಗಳು ಜೀವನದ ಉಚ್ಚಧ್ಯೇಯಗಳಾಗಿವೆ. ನಿತ್ಯ ಜೀವನದಲ್ಲಿಯೂ, ಆರ್ಥಿಕ ವ್ಯವಹಾರದಲ್ಲಿಯೂ, ಸಹಕಾರಿಗಳಲ್ಲಿ ಒಗ್ಗಟ್ಟು, ಸ್ವಾತಂತ್ರ್ಯ, ದಯ, ಧರ್ಮ ಮುಂತಾದ ಸದ್ಗುಣಗಳು ಕಂಡುಬರುತ್ತವೆ.

೩ ಸರ್ವ ಸಮಭಾವನೆಯೇ ಸಹಕಾರದ ಅಡಿಗಲ್ಲು.

೪ ಮಾನವನ ಅಪಾರ ಕೆಲಸವನ್ನೂ, ವೆಚ್ಚವನ್ನೂ ಕಡಿಮೆ ಮಾಡುವದೇ ಸಹಕಾರ ತತ್ವದ ಮುಖ್ಯಗುಣ.

೫ ಸಹಕಾರ ತತ್ವವು ಮಾನವನ ಜೀವನದಲ್ಲಿ ಅವನ ನೈತಿಕ ಗುಣದ ಆಧಾರದ ಮೇಲೆ ಪ್ರಾರಂಭವಾದ ಅರ್ಥಸಾಧನೆಯ ಮಾರ್ಗವು.

೬ ವಿಶ್ವಶಾಂತಿಯು ಶಾಸ್ವತವಾಗಿ ಬೆಳಗಬೇಕಾದರೆ ಸಹಕಾರ ತತ್ವಗಳ ಆಸರೆಯಲ್ಲದೆ ಬೇರೆ ಮಾರ್ಗವಿರುವದಿಲ್ಲ.

೭ ಮಾನವ ಸಂಸಾರಗಳ ಸಾರ್ವತ್ರಿಕ ಸೌಹಾರ್ದತೆ, ನ್ಯಾಯಪರತೆ, ನೈತಿಕ ಸ್ವಾತಂತ್ರ್ಯ, ಸರ್ವಸಮಾನತಾಭಾವ, ನೆಮ್ಮದಿಯ ಸಹವಾಸ, ಈ ಮೊದಲಾದ ಸದ್ಗುಣಗಳ ಐಕ್ಯತೆಗೆ ಸಹಕಾರ ತತ್ವದ ಸಹಾಯವಾಗುತ್ತದೆ.

೮ ಮಾನವ ಜೀವನವನ್ನು ಪುಷ್ಕಲವನ್ನಾಗಿಯೂ, ಉದಾರಯತವನ್ನಾಗಿಯೂ ಮಾಡುವದೇ ಸಹಕಾರದ ಪರಮಧ್ಯೇಯ.

೯ ವಿಶಿಷ್ಟ ಉದ್ದೇಶವನ್ನು ಪ್ರಾಮಾಣಿಕತನದಿಂದ ನೆರವೇರಿಸುವದಕ್ಕೆ ಮಾಡಿಕೊಂಡಿರುವ ಸಂಘಟನೆಯೇ ಸಹಕಾರವು.

೧೦ ಸಹಕಾರಿಗಳು ಮಾನವ ಜಾತಿಯ ಮಿತ್ರರು. ಅವರಿಗೆ ಯಾರ ಸಂಗಡಲೂ ಶತ್ರುತ್ವವಿರುವದಿಲ್ಲ.

೧೧ ಸಹಕಾರದಲ್ಲಿ ಪ್ರತಿಯೊಬ್ಬನು ವ್ಯವಹಾರದಕ್ಷನಾಗುವನು.

೧೨ ಸಾಮಾಜಿಕ ಪ್ರಯೋಗಗಳಲ್ಲಿ ಸಹಕಾರವು ಅತ್ಯುತ್ತಮ ಸಾಧನವಾಗಿದೆ.

೧೩ ಪದಾರ್ಥಗಳನ್ನು ಸಕಾಲದಲ್ಲಿ ಒದಗಿಸುವ ವಿಧಾನವೇ ಸಹಕಾರದ ಮುಖ್ಯ ಅಂಗ.

೧೪ ಶಿಕ್ಷಣವಿಲ್ಲದ ಸಹಕಾರವು ಕಿಡಕಿಗಳಿಲ್ಲದ ಮನೆಯಂತೆ.

೧೫ ಸಹಕಾರದಿಂದಲೇ ಸಮಾಜದ ಹಾಗೂ ಉದ್ಯೋಗಗಳ ಏಳಿಗೆಯಾಗುವದು.

೧೬ ಸಹಕಾರವು ಯಾರ ಅಹಿತವನ್ನು ಮಾಡದೆ ಎಲ್ಲರ ಹಿತವನ್ನು ಸಾಧಿಸುತ್ತದೆ.

೧೭ ಜನತೆಯ ಸ್ಥಿರವಾದ ಹಿತಸಾಧನೆಗಳಿಗೆ ಸಹಕಾರವೇ ಮುಖ್ಯ ಸಾಧನವು.

೧೮ ಸಹಕಾರ ತತ್ವವು ವ್ಯಾಪಾರವನ್ನು ವ್ಯವಸೆ ಮಾಡುವ ಸಾಧನವಾಗಿದೆ.

೧೯ ಸಹಕಾರವು ಸ್ವಾವಲಂಬನೆ ಮತ್ತು ಸಾಮಾಜಿಕ ಶೀಲ ಇವೆರಡರ ಬಲದ ಮೇಲೆ ನಿಂತಿರುವ ಅರ್ಥಸಾಧನೆಯ ಮಾರ್ಗ.

೨೦ ಗ್ರಾಮ ಜೀವನದಲ್ಲಿ ಸಮರ್ಪಕವಾದ ಬದಲಾವಣೆಯುಂಟಾಗಿ ಹೆಚ್ಚು ಅಭಿವೃದ್ಧಿಯುಂಟಾಗಬೇಕಾದರೆ ಪರಸ್ಪರ ಸಹಕಾರ ಸಂಘಗಳ ಸಹಾಯವು ಅತ್ಯವಶ್ಯಕ.

೨೧ ಮಾನವನ ಘನವಾದ ಉದ್ದೇಶಗಳನ್ನು ಆರ್ಥಿಕ ಜೀವನದಲ್ಲಿ ಸಫಲಗೊಳಿಸಲು ಸಾಧಕವಾದುದೇ ಸಹಕಾರ ಮಾರ್ಗ.

೨೨ ಭಾಂಡವಲವನ್ನು ಭಾಂಡವಲಗಾರರ ಹಿಡಿತದಿಂದ ತಪ್ಪಿಸಿ ಅದನ್ನು ಮಾನವನ ಸೇವೆಗಾಗಿ ವಿನಿಯೋಗಿಸಿಕೊಳ್ಳುವದೂ, ಸ್ವಾವಲಂಬನೆಯಿಂದ ವ್ಯಕ್ತಿತ್ವವನ್ನು ರಕ್ಷಿಸಿ, ಸ್ವಸಾಮರ್ಥ್ಯ ದಿಂದ ಜೀವನ ನಡೆಯಿಸುವದೂ ಸಹಕಾರ ಪದ್ಧತಿಯ ಮುಖ್ಯ ಗುರಿಯಾಗಿದೆ.

೨೩ ಸದಸ್ಯರ ನೈತಿಕ ಮತ್ತು ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವದು, ಇವುಗಳಿಗೆ ಅನುಕೂಲವಾದ ವ್ಯವಸ್ಥೆಮಾಡುವದು, ಸದಸ್ಯರ ಲಾಭದಾಯಕವಾದ ಉದ್ಯಮಗಳಿಗೆ ಭಾಂಡವಲವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸುವದು ಸಹಕಾರದ ರೀತಿನೀತಿಗಳಾಗಿವೆ.

೨೪ ಬಡವರ ಮತ್ತು ಅನಾಥ ಜನರ ಮೇಲೆ ಆಗುತ್ತಿರುವ ಜುಲಮೆ ಅಥವಾ ಅನ್ಯಾಯವನ್ನು ತಪ್ಪಿಸುವದಕ್ಕೆ ಸಹಕಾರವು ಉಪಯುಕ್ತವಿರುವದು; ಯಾಕಂದರೆ ಇದರಿಂದ ಸಂಘ ಸಾಮಾರ್ಥ್ಯ ವುಂಟಾಗುತ್ತದೆ.

೨೫ ಪ್ರಯೋಜನವಾದ ಸೇವೆಯೇ ಮುಖ್ಯಧ್ಯೇಯವಾಗಿರುವಂತಹ ಉತ್ತಮ ಸಹಕಾರಿಯು ಸಾವಿರಾರು ಬಡಜನರ ಕೃತಜ್ಞತೆಗೆ ಪಾತ್ರನಾಗುವನಲ್ಲದೆ ಅಂತಃಕರುಣ ಪೂರ್ವಕವಾಗಿ ತಾನುಮಾಡಿದ ಕೆಲಸಕ್ಕೂ ಪರಮಾತ್ಮನ ಅನುಗ್ರಹಕ್ಕೂ ಪಾತ್ರನಾಗುವನೆಂಬುದನ್ನು ನಾವು ಜ್ಞಾಪಕದಲ್ಲಿಡಬೇಕು.

೨೬ ಧನಿಕರೂ, ಬಡವರೂ ಭೇದಭಾವವಿಲ್ಲದೇ ಒಟ್ಟಿಗೆ ಸೇರಿ ಕೆಲಸ ಮಾಡಿ, ಸುಖ ಸಂಪತ್ತನ್ನು ಸಂಪಾದಿಸಿ, ಸಂತೋಷದಿಂದ ಜೀವನ ಸಾಧಿಸಲು ಸಹಕಾರೀ ಸಂಸ್ಥೆಗಳು ಉತ್ತಮ ಕ್ಷೇತ್ರಗಳಾಗಿವೆ.

೨೭ ಪ್ರಪಂಚದ ಆರ್ಥಿಕ ರಚನಾಕ್ರಮಕ್ಕೂ, ಶಾಂತಿ ಸಮಾಧಾನ ಸ್ಥಾಪನೆಗೂ ಸಹಕಾರ ತತ್ವವು ಸಹಾಯವಾಗಿರುತ್ತದೆ.

೨೮ ಪದಾರ್ಥಗಳನ್ನು ತಯಾರಿಸುವವರೂ, ಕೊಳ್ಳುವವರೂ ಒಟ್ಟಿಗೆ ಸೇರಿ, ಪರಸ್ಪರ ಪ್ರೀತಿ ವಿಶ್ವಾಸಗಳಿಂದ ವ್ಯಾಪಾರ ಮಾಡುವಂತೆ ಮಾಡುವದೇ ಸಹಕಾರದ ಮುಖ್ಯ ಧ್ಯೇಯ.

೨೯ ಕ್ರಿಯಾತ್ಮಕ ಸಂಸ್ಥೆಗಳಿಗೂ, ಪೂರ್ಣ ವಸ್ತುವನ್ನು ಮಾರಾಟ ಮಾಡುವ ಸಂಸ್ಥೆಗಳಿಗೂ ಇರುವ ಅಂತರವನ್ನು ಹೋಗಲಾಡಿಸಿ ಸಮಾಜದ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಬೇಕಾದರೆ ಸಹಕಾರ ತತ್ವವೇ ಮುಖ್ಯವಾದ ಸಾಧನವಾಗಿದೆ.

೩೦ ಬರೀ ಹಣದ ವ್ಯವಹಾರವನ್ನು ಮಾಡುವದು ಸಹಕಾರೀ ಚಳವಳಿಯ ಉದ್ದೇಶವಿರುವದಿಲ್ಲ. ಸಭಾಸದರ ಆರ್ಥಿಕ ಪರಿಸ್ಥಿತಿಯು ಕೂಡ ಸಾಮಾಜಿಕ ಪರಿಸ್ಥಿತಿಯು ಸುಧಾರಿಸಬೇಕೆಂದೂ ಮತ್ತು ನೀತಿಯ ದೃಷ್ಟಿಯಿಂದ ಅಥವಾ ವರ್ತನದಿಂದ ಅವರ ಶ್ರೇಷ್ಠತ್ವಕ್ಕೆ ಕುಂದು ಬರಕೂಡದಂತೆಯೂ ಸಹಕಾರೀ ಚಳವಳಿಯ ಮುಖ್ಯ ಉದ್ದೇಶವಿರುವದು.

**ತನಗೆಲ್ಲರೆಲ್ಲರಿಗೆ ತಾನೊಲ್ಮೆಯಿಂದಾ**
**ಅಸುವಾಗಿ ಬೆರಸಿಹುದೆ ಸಹಕಾರವೆಂದಾ**

— ಮುಗಿದುದು —

